# "ಮೈಲಿಕಲ್ಲಿನೊಡನೆ ಮಾತುಕತೆಗಳು"

ಲಘು ನಿಬಂಧಗಳು

ಲೇಖಕ:

**ಶಿವರಾಮ ಕಾರಂತ**

(ಎರಡನೆಯ ಮುದ್ರಣ)

೧೯೪೮

ಪ್ರಕಾಶಕ:

ಹರ್ಷ ಮುದ್ರಣ, ಪ್ರಕಟಣಾಲಯ, ಪುತ್ತೂರು, ದ. ಕ.

**ಬೆಲೆ: ರೂ. ೧-೮-೦**

## ಮೊದಲ ಮಾತು

ಈ ಲಘು ಬರಹಗಳು ಹಿಂದೆ 'ಸ್ವದೇಶಾಭಿಮಾನಿ'ಯಲ್ಲೂ, ಇನ್ನಿತರ ಪತ್ರಿಕೆಗಳಲ್ಲೂ ಪ್ರಕಟವಾದುವು. ಕೊನೆಯ ಬರಹ 'ಅಶ್ವತ್ಥ ಪ್ರಲಾಪ' ಮಾತ್ರ ಹೊಸತಾಗಿ ಸೇರಿಸಿದುದು. ನಮ್ಮ ಜನತೆಯ ಸಂಸ್ಕೃತಿಯ ಮೈಲಿಕಲ್ಲುಗಳೇ ಈ ವಿವಿಧ ನಿಬಂಧಗಳ ಗುರಿ; ಅವನ್ನು ಕೆಣಕಿ, ವಿಚಾರ ಪ್ರಚೋದನ ಮಾಡುವುದೇ ಉದ್ದೇಶ. ಅವುಗಳಲ್ಲಿ ಕೆಲವು ನಿರುದ್ದೇಶಿತವಾದ ಹಾಸ್ಯಪ್ರೇರಣೆ ಮಾಡಲೂ ಬಹುದು. ಅಂತು ಲಘು ಪ್ರಬಂಧಗಳಾಗಿ ಅವು ಓದುಗರನ್ನು ಸಂತೋಷಗೊಳಿಸಿದಲ್ಲಿ ಬರೆದವನ ಶ್ರಮ ಸಾರ್ಥಕವೆಂದೇ ತಿಳಿಯುತ್ತೇನೆ.

ಪುತ್ತೂರು.
ತಾ. ೧೫ - ೪ - ೧೯೪೪.



ಇತಿ,
**ಶಿವರಾಮ ಕಾರಂತ.**



# ಮೈಲಿಕಲ್ಲಿನೊಡನೆ ಮಾತುಕತೆಗಳು

## ನಮ್ಮೂರ ಕೆರೆ

ಎಲ್ಲ ಊರುಗಳಲ್ಲೂ ಒಂದೊಂದು ಕೆರೆಯಿರಬಹುದು; ಹಾಗಿಲ್ಲದ ಊರು ಊರೇ ಅಲ್ಲವೆಂದರೂ ಸಲ್ಲುವುದು. ಅಂತೆಯೇ ನಮ್ಮೂರಿಗೂ ಒಂದು ಕೆರೆಯಿತ್ತು— ಇದೆ. ನಮ್ಮೂರ ಕೆರೆಯೆಂದ ಮೇಲೆ ಏನಾದರೂ ಹೆಚ್ಚಳ ಇರಬೇಡವೇ? ಅದರ ಹೆಸರೇ ಅದನ್ನು ಸಾರುತ್ತದೆ. ಕೆರೆಯನ್ನು ಕಟ್ಟಿಸಿದವರು ಗಟ್ಟಿಗರಾದುದರಿಂದಲೋ ಏನೋ— ಅದಕ್ಕೆ ಚೆನ್ನಾದ ಹೆಸರನ್ನು ಇಟ್ಟಿದ್ದರು. ಅದನ್ನು ಕೇಳಿದಲ್ಲಿ, ಎಷ್ಟೋ ಊರವರಿಗಿಂತ ನಮ್ಮೂರವರು ಜಾಣರೆಂದು ತಿಳಿಯುವುದು. ಹುಬ್ಬಳ್ಳಿಯವರ ‘ಗುರುಸಿದ್ಧಪ್ಪನ ಹೊಂಡ’, ಮೈಸೂರವರ, ‘ಅಮ್ಮಸಂದ್ರ’, ‘ಬೊಮ್ಮಸಂದ್ರ’, ‘ನೀಲಸಂದ್ರ’ಗಳು ಏನು ಚೆಲುವಿನ ಹೆಸರುಗಳಂತೆ? ಮುಖ್ಯವಾಗಿ ಎಮ್ಮೆಗಳ ಸ್ನಾನಕ್ಕೆ ಯೋಗ್ಯವಾದವುಗಳನ್ನು ಸಮುದ್ರ (ಸಂದ್ರ)ವೆನ್ನಬೇಕೇ? ಕಡಲು ಕಾಣದ ಮೈಸೂರವರಿಗೆ ಕೆರೆ ಸಮುದ್ರವಾದರೆ, ಹುಬ್ಬಳ್ಳಿಯ ನೀರು ಕಾಣದ ಮಂದಿಗೆ, ಕೆರೆ ಹೊಂಡವಾಯಿತು. ಕಡಲನ್ನು ಕಾಣುತ್ತಿರುವ ನಮ್ಮ ಜನರಿಗೆ ಕಡಲಿನ ಮುಂದೆ ಕೆರೆ ‘ತೀರ್ಥ!’ ಅಂತೆಯೇ ನಮ್ಮೂರ ಕೆರೆಗೆ ‘ವರುಣತೀರ್ಥ’ ಎಂಬ ನಾಮಕರಣವಿದೆ. ಅಲ್ಲಿಂದ ಪಡುವಣಕ್ಕೆ ಹೋದರೆ ಒಂದು ಮೈಲಿನ ದೂರದಲ್ಲಿ ವರುಣನ ರಾಜ್ಯವಿದೆ. ಅಲ್ಲಿನದು ಉಪ್ಪು-ನೀರು; ಇಲ್ಲಿನದು ಸಿಹಿ ನೀರು. ಅಲ್ಲಿಂದಿಲ್ಲಿಯ ತನಕ ಒಂದು ಕಾಲದಲ್ಲಿ ಕಡಲು ಹಾಸಿದ್ದಿರಬೇಕು; ಅಂತೆಯೇ ಕಡಲಿನ ಮರಳಿನ ರಾಶಿ ಇದರ ಸುತ್ತಲೂ

ಹಾಸಿಕೊಂಡಿದೆ. ನಿರ್ಮಲವಾಗಿಯೂ ಉಳಿದಿದೆ.

ಸೆಕೆಗಾಲದ ಒಂದು ದಿನ ನನ್ನ ಸವಾರಿ, ನಿತ್ಯದಂತೆ ಅಲೆದಾಡಲು ಹೊರಟಿತು. ಊರೆಲ್ಲ ಅಲೆದಾಡಿಕೊಂಡು, ನಮ್ಮೂರ ಕೆರೆಯೇರಿಯ ಮೇಲಕ್ಕೆ ಬಂದು ಕುಳಿತೆ. ಅಲ್ಲಿ ಕೈಯಿಂದ ಮರಳನ್ನು ಹಾರಿಸುತ್ತ ಎಷ್ಟು ಹೊತ್ತು ಕಳೆದೆನೋ—ಕಣ್ಮುಂದೆಯೇ ಬಾನಿನ ಬಣ್ಣಗಳೆಲ್ಲ ಮಾಯವಾಗಿ ಹೋಗಿದ್ದುವು. ಇನ್ನು ಮೈಗೆ ತಂಪಿಡಲು ಸ್ನಾನ ಮಾಡುವ ಎಂದು ಕೆರೆಗಿಳಿಯಲು ಹೋದೆ. ಯಾವ ಕಡವಿನಿಂದಿಳಿಯಲಿ—ಎಂದು ಯೋಚನಾಪರನಾಗಬೇಕಾಯಿತು. ಹಾಗೆ—ನಮ್ಮೂರ ಕೆರೆಯನ್ನಿಳಿಯಲು ತುಂಬ ಪರಿಚಯವಿರಬೇಕು. ನೀರಲ್ಲಿ ಮುಳುಗುವ ಭೀತಿಯಿಲ್ಲ. ಕೊರಳಿಗೆ ಕಲ್ಲುಕಟ್ಟಿಕೊಂಡು ಬಿದ್ದರೂ ಅಲ್ಲಿ ಪ್ರಾಣ ಹೋಗಲಾರದು. "ಆತ್ಮಹತ್ಯೆಗಿದು ತಾಣವಲ್ಲ" ಎಂದೇ ಅದರ ಬಿರುದು. ಆದರೆ ಇಳಿಯುವವರ ಹೆದರಿಕೆ ಇದು: ಸಮನಾದ ದಾರಿಯಲ್ಲಿ ಇಳಿಯದವನು ನೀರು ಸೇರುವ ಬದಲು ಕೆಸರನ್ನು ಮುಕ್ಕಿಯಾನು! ಅದಕ್ಕೇನೆ ಪರಿಚಿತಿ ಬೇಕಾದುದು. ಕಾಲಿಟ್ಟರೆ ಆ ಕಾಲಿಗೆ ಕಪ್ಪೆ ತಗಲಬಹುದು; ನೀರೊಳ್ಳೆ ಸುತ್ತಿಕೊಳ್ಳಬಹುದು; ಹಾವು ಕಡಿದರೂ ಕಡಿಯಬಹುದು. ಅದೆಲ್ಲ ಅವರವರ ಹಣೆಯ ಮೇಲಿನ ಬರಹ—ಎಂದು ಊಹಿಸುವ. ಆದರೆ ಸ್ನಾನಮಾಡುವವರು ಬಟ್ಟೆಒಗೆಯಲು ಬಯಸಬಹುವಲ್ಲ. ಅದಕ್ಕೆ ಕಲ್ಲು ಬೇಕು. ಆ ಕಲ್ಲಿನ ಮೇಲೆ ಕಾಲಿರಿಸಿದರೆ ಪಾಪಾಜಿಯಿಂದ ಜಾರಿ ಅವನು ನೀರು ಸೇರಬಾರದು. ಅದು ಮಾತ್ರವಲ್ಲ—ನೀವು ಎಲ್ಲಿ ಇಳಿದಿರಿ—ಎಂಬುದರ ಮೇಲಿಂದ ನಿಮ್ಮ 'ವರ್ಣ' ತೂಕವಾದೀತು. ಪಡುವಣದಿಂದಿಳಿದರೆ ಶೂದ್ರರಾಗುವಿರಿ. ತೆಂಕು, ಬಡಗು ಬ್ರಾಹ್ಮಣ್ಯದ ಗುರುತು; ಮೂಡಣದವರು, ಅವರು, ಅವರನ್ನು ಬ್ರಾಹ್ಮ

ಣಾರೆಂದು ಕರೆಯಬೇಕಷ್ಟೆ — ಹೀಗೆಲ್ಲ ಊರಿನ ರೂಢಿಧರ್ಮ.

ಆದರೆ ಒಮ್ಮೆ ಕೆರೆಯನ್ನಿಳಿದು ಎಲ್ಲಿಗೆ ಹೋದರೂ ನಡುವನ್ನು ಮೀರದಷ್ಟು ನೀರು. ಮಳೆಗಾಲದಲ್ಲೂ ನೀರಿನ ಮಿತಿ ಮೀರಲಾರದು. ನೆಲದಲ್ಲಿ ಈಸುವುದಕ್ಕಿಂತ ಇಲ್ಲಿ ಈಸುವುದು ವಾಸಿ. ಹಾಗೆ ನಡುನೀರಲ್ಲಿ ಕೈಯಿಟ್ಟು, ಕಾಲು ಬಿಟ್ಟು, ಶಲಭನಾಗಿ ಬಾಯಿಂದ ನೀರನ್ನು ಗುಳುಗುಳು ಮಾಡುತ್ತಿರುವುದು ನನ್ನ ವಿನೋದ. ಅಲ್ಲೇ ಕುಳಿತರೂ ಆಯಿತು. ತುಸು ಮೀರಿ ಮುಂದೆ ಸರಿದರೆ ಕೆಸರು ತುಳಿಯಬೇಕು. ಜಿಗಣೆಗಳ ನೆಚ್ಚು; ಒಳ್ಳೆಗಳ ವಿಹಾರ-ಇನ್ನೂ ಮುಂದೆ. ನೈದಿಲೆಗಳ ನಾಳಗಳೇ ಕಾಲಿಗೆ ಸುತ್ತಿ 'ಹಗ್ಗ — ಹಾವು ನ್ಯಾಯ'ವನ್ನು ಕಲ್ಪಿಸಲೂ ಬಹುದು.

ಈ ರೀತಿಯ ಜಲ — ನೆಲ ಸ್ತಂಭನ ವಿದ್ಯೆಯಲ್ಲಿ ಎಳೆತನದಿಂದ ಪಾರಂಗತನಾಗಿ ಬಂದ ನಾನು, ಆ ದಿನವೂ ನೀರನ್ನು ಇಳಿದೆ. ಸೆಕೆಯ ಕಾಟ ತಪ್ಪಿಸಿ, ಹವೆಯು ಶೀತವಾಗುವ ತನಕ, ಕತ್ತಿನ ತನಕ ನೀರಲ್ಲಿ ಕುಳಿತಿರುವ ಬಯಕೆಯಿಂದ, ಆ ನಸುಕಿನಲ್ಲಿಳಿದೆ. ಆದರೆ ಕಾಲಿಗೆ ನೀರು ತಗಲಿತೇ ವಿನಾ ಕಾಲಿನಿಂದ ಮೇಲಕ್ಕೇರಲಿಲ್ಲ. ಹಾಗೇನೆ ನಡೆನಡೆದು ಮುಂದುವರಿದೆ. ನನ್ನ ಶರೀರವು ನೀರ ಕುಣಿಯೊಂದರಲ್ಲಿ ನನ್ನನ್ನಿಳಿಸಿ ಬಿಟ್ಟಿತು. ಬಾವಿಗೆ ಬಿದ್ದವನಂತೆ ಗಾಬರಿಗೊಂಡು ಆಚೀಚೆಗೆ ಕೈಯೊಡ್ಡಿದೆ. ಆ ನೀರಿನ ಹೊಂಡ ಆಳವಾಗಿರಲಿಲ್ಲ; ಅಗಲವೂ ಆಗಿರಲಿಲ್ಲ. ಇದ್ದುದರಲ್ಲೇ ತೃಪ್ತಿಪಟ್ಟು ಕುಳಿತೆ. ನನ್ನಾಚೆ ಇನ್ನೊಂದು ಹೊಂಡದಲ್ಲಿ, ತಪಸ್ವಿಯಂತೆ ಕೋಣವೊಂದು ಮಲಗಿಕೊಂಡಿತ್ತು. ಅದರ ಮೇಲೆ ನಮ್ಮೂರಿನ 'ಬಡಾ' ಕಪ್ಪೆಗಳು ಕುಳಿತಿದ್ದುವು. ನಮ್ಮೂರಿನ ಹಿರಿಯ ಕಪ್ಪೆಗಳೆಂಬ ಒಂದು ಗೌರವವಲ್ಲವಾಗಿದ್ದರೆ, ಈ ನನ್ನ ತೀರ್ಥಬಂಧುಗಳ ಮೇಲೆ ನನಗೇತರ ಹೆಮ್ಮೆ? ಅವನ್ನು ಗದರಿಸಿ ಓಡಿಸಲೇ?

ನಮ್ಮೂರ ಕಪ್ಪೆ, ಬಾಯಿ ತೆರೆದರೆ ಕಿವಿಯೊಡೆದೀತು. ನಮ್ಮೂರವರ ಗಂಟಲದನಿ ಅದಕ್ಕೊಂದು ಕಡಮೆಯಿಲ್ಲ; ಆದರೂ ಸ್ಪರ್ಧೆಗೆ ನನ್ನಲ್ಲಿ ಸಾಹಸ ಸಾಲದಾಯಿತು.

ಈ ಅವಸ್ಥೆಯಲ್ಲಿ ನನ್ನ ಸ್ವಂತ ಹೆಮ್ಮೆಯು ಕುಗ್ಗಿತು. ಆಚೆ, ಸಹ ಸಾಂಖ್ಯಿಕನಾಗಿರುವುದು ಗಂಡು ಎಮ್ಮೆ; ಅದೂ ಸೆಕೆಗಾಗಿ ನೀರಲ್ಲಿ ಯೋಗಾರೂಢವಾಗಿದೆ. ಇದನ್ನೆಲ್ಲ ಎಣಿಸಿ ನನಗೆ ನಮ್ಮ ಊರ ಕೆರೆಯ ಹೆಸರಿನ ವಿಚಾರವಾಗಿ ಹೊಳೆದು "ಅಯ್ಯೋ ದೇವರೆ! ಯಾರಪ್ಪ—ಈ ಕೆರೆಯನ್ನು ವರುಣತೀರ್ಥವೆಂದು ಹೇಳಿ ಮಾನ ಕಳೆದವರು?" ಎಂದು ಉದ್ಗರಿಸಿದೆ. ನನ್ನ ಬಾಯಿ ತೆರೆದುದೇ ತಡ—ನನ್ನ ಕೆರೆ ಬಂಧುಗಳಾದ ಮಂಡೂಕಗಳು "ಇಂಕಿಲಾಬ್ ಜಿಂದಾ ಬಾದ್" ಎಂದು ರಾಗಮಾಡಿದುವು. ಅದನ್ನು ಕೇಳುತ್ತಿರುವುದರೊಳಗೇನೆ ನಮ್ಮೂರ ಕೆರೆಯ ಆತ್ಮವು ಮೇಲೆದ್ದು "ಏಕೆ ನಿನಗೆ ವ್ಯಥೆ? ನನ್ನ ಹೆಸರಿಗಾಗಿ ಬೇಸರಿಕೆಯೇನು?" ಎಂದಿತು.

"ಅಲ್ಲವಯ್ಯಾ ಜಲಪ್ರೇತ! ಇದೇನು ಕೆರೆಯೋ, ಕಪ್ಪೆಗಳ ಆವಾಸವೇ? ಎಮ್ಮಾಲಯವೆ?....ಇದನ್ನು ತೀರ್ಥವೆನ್ನಬೇಕೆ?"

"ಅಣ್ಣಾ, ಸಿಟ್ಟಾಗುವೆಯೇಕೆ? ನಿನ್ನವರು ಇದಕ್ಕೂ ಹೊಲಸಾದ ನೀರನ್ನು ತೀರ್ಥವೆಂದು ಕುಡಿಯುತ್ತಿರುವಾಗ, ಅದಕ್ಕೆ ಕಾಸನ್ನು ತೆತ್ತು ಮಿಂಯುವಾಗ, ನಾನೇನು ಕಡಮೆ! ನನ್ನಲ್ಲಿನ ಮಿಯಾಟಕ್ಕೆ ದಂಡತೆರಬೇಕಾಗಿಯೂ ಇಲ್ಲ!" ಎಂದಿತು ಜಲಪ್ರೇತ.

"ಅದು ಸರಿನಯ್ಯಾ; ಆದರೆ ನಿನ್ನ ದುರ್ದೈವಕ್ಕಾಗಿಯೇ ನನ್ನ ಮರುಕ. ನಾನು ಚಿಕ್ಕವನಾಗಿದ್ದಾಗ ಇಲ್ಲಿ ಬಂದು ಮಿಂದ ಹಂಬಲಿನಿಂದ ಈಗಲೂ ಬಂದೆ. ಆಗ ತೀರ್ಥವೆಂಬ ಹೆಸರು ತುಸುವಾದರೂ

ಸಲ್ಲುತಿತ್ತು. ಈಗ ಇಲ್ಲಿ ನೀರೂ ಇಲ್ಲ; ನಾರುವುದೂ ಹೆಚ್ಚಾಗಿದೆ. ಇದೇನು ಸಂಸ್ಕಾರ?" ಎಂದೆ.

ಜಲಪ್ರೇತ ನಕ್ಕಿತು. "ನನ್ನ ಜೀವನ ಸಂಸ್ಕಾರವೇ? ಅದು ತೀರ ಕ್ರಮಗತವಾದುದು. ಅದು ಕಾವ್ಯಮಯವಾದುದು. ಜೀವನದಲ್ಲಿ ಏಳು, ಬಾಳು, ಬೀಳುಗಳಿರುವಂತೆ—ನನಗೂ ಮೂರನೆಯ ಕಾಲ ಬಂದಿದೆ."

"ಇದೇನು ವೇದಾಂತವಯ್ಯಾ?"

"ಇದು ವೇದಾಂತವಲ್ಲ ರಸಿಕ, ಇದು ಕಾವ್ಯ!"

"ಏನು ಕಾವ್ಯ? ಕಾವ್ಯವೆಂದರೆ 'ಕೀವ್ಯ'ವೇ? ಹೊಲಸೇ?"

"ಹೊಲಸಿನಲ್ಲೂ ಸತ್ಯವಿದೆ, ಸೌಂದರ್ಯವಿದೆ!"

"ಹೇಗೆ?"

"ಈಗ ನನ್ನ ಚರಿತ್ರೆಯ ಸೊಗಸನ್ನೇ ಕೇಳು:

ಮೊದಲು ನಾನಾದೆ ಒಬ್ಬ ಋಷಿಗಾಗಿ
ಆ ಬಳಿಕ ನೆರವಾದೆ ಊರ ಕೃಷಿಗಾಗಿ
ಈಗಿರುವೆ ನೋಡಯ್ಯ ನುಸಿಗಾಗಿ—"

ಆ ಮಾತನ್ನು ಕೇಳಿ ಕಾವ್ಯದ ಸೊಗವನ್ನು ಪೂರ್ತಿ ಮಾಡಲು "ಕೂಡಲ ಸಂಗಮದೇವಾ" ಎಂದೆ ನಾನು.

"ನೋಡು, ದಿನೇ ದಿನೇ ನನ್ನಿಂದಾಗಿ ಬದುಕುತ್ತಿರುವ ಜೀವಿಗಳ ಸಂಖ್ಯೆ ಹೆಚ್ಚುತ್ತಿರುವುದೇ ಹೊರತು ಕಡಮೆಯಾಗಿಲ್ಲ. ಮೊದಲು ಎರಿಸ್ಟಾಕ್ರೆಸಿಯಾಗಿದ್ದ ನಾನು, ಡೆಮೊಕ್ರೆಸಿಗಾಗಿ ಬಾಳಿದೆ. ಈಗ ತೀರ ವಿಶಾಲಾರ್ಥದ 'ಕ್ರೆಸಿ' ನನ್ನದು; ನುಸಿಯೋಕ್ರೆಸಿ!"

ಅದರ ವೇದಾಂತ, ಕಾವ್ಯ, ರಾಜಕೀಯ ವಿದ್ವತ್ತು ನನ್ನ ತಲೆಯ ಮಿದುಳನ್ನು ಆವಿಗೈಯತೊಡಗಿತು. "ಅಯ್ಯಾ, ಹಿಂದಣ ಋಷಿಸೇವೆ,

ಕೃಷಿಸೇವೆಗಳು ನಿಜವಿರಲಿ ಇಲ್ಲದಿರಲಿ; ಈಗಣ ನಿನ್ನ– ಮಸಿಸೇವೆ —ಕೃಷಿ ತೀರ ನಿಜ" ಎಂದೆ.

"ಕೇಳು ಹುಡುಗ, ಬಲು ಹಿಂದೆ ಇಲ್ಲೊಂದು ಋಷ್ಯಾಶ್ರಮವಿತ್ತು. ಆಗ ಈ ಕೆರೆಯನ್ನು ಸುಂದರವಾಗಿ ನಿರ್ಮಿಸಿ, ಸೋಪಾನರಂಜಿತವಾಗಿ ಮಾಡಿದರು. ಇಲ್ಲಿನ ನೀರು ತೀರ್ಥಕ್ಕಿಂತ ಶುದ್ಧವಾಗಿತ್ತು. ಯಾರಿಗೂ ಕಾಲಿರಿಸಲು ಭೀತಿ ಬರುವಂತಿತ್ತು!"

"ಆ ಭೀತಿ ಈಗ ಇನ್ನಷ್ಟು ಅಧಿವಾಗಿದೆ!"

ಆ ಜಲಪ್ರೇತವು ನನ್ನ ಮಾತನ್ನು ಕೇಳದವನಂತೆ ಮುಂದುವರಿಸುತ್ತ 'ನೂರಾರುವರ್ಷ ಕಡಲದಂಡೆಗೆ ಇದಿರಾಗಿದ್ದ ನನ್ನನ್ನು 'ವರುಣತೀರ್ಥ' ಎಂದು ಕರೆದರು. ಇಲ್ಲಿ ಮಿಂದವರು ಕಡಲಿಗೆ ಹೋಗಿ ಮಿಂದರು; ಅಲ್ಲಿ ಮಿಂದವರು ತಿರುಗಿ ಇಲ್ಲಿ ಬಂದು ಮಿಂದರು."

"ಹೂಂ" ಎಂದೆ ನಾನು, ಉದಾಸೀನನಾಗಿ.

"ಆ ಮೇಲೆ— ನಿನ್ನ ಹಿರಿಯರು...." ಎಂದಿತು ಕೆರೆಯಾತ್ಮ.

"ನನ್ನ ಹಿರಿಯರೇ?" ಎಂದು ನಾನು ಕೇಳಿದೆ,

ಆ ಮಾತನ್ನು ಅದು "ನಿನ್ನೂರ ಹಿರಿಯರು" ಎಂದು ಮಾರ್ಪಡಿಸಿ, ವೈಯಕ್ತಿಕ ಮಾನನಷ್ಟದ ಆರೋಪವನ್ನು ತಪ್ಪಿಸಿಕೊಂಡು ಹೀಗೆ ಹೇಳಿತು:

"ನನ್ನ ಸೋಪಾನದ ಕಲ್ಲುಗಳನ್ನು ತಂತಮ್ಮ ಮನೆಗಳಿಗೆ ಸಾಗಿಸಿದರು; ನನ್ನ ಕೆಸರನ್ನು ಎತ್ತದೆ ಕುಳಿತರು."

"ಅವರಿಗೆ ಕೆಸರಿನ ಸ್ನಾನ ಇಷ್ಟವಾಗಿತ್ತೇ?"

"ಹಾಗೇನಿಲ್ಲ. ಇದು ತೀರ್ಥವೆನಿಸಿಕೊಂಡಿದ್ದಷ್ಟು ಕಾಲ ಬ್ರಾಹ್ಮಣರೇ ಬಂದು ಇಲ್ಲಿ ಮಿಂದು ಹೋದರು. ನಾನು ರೂಪುಗೆಡಲು ಎಲ್ಲರೂ

ಬಂದು ಮಿಂದರು. ಶೂದ್ರರು ಮೀಯುವ ಕೆರೆಯ ಕೆಸರನ್ನು ಬ್ರಾಹ್ಮಣರು ತೆಗೆಯಲಿಲ್ಲ; ಬ್ರಾಹ್ಮಣರ ಕೆರೆಯೆಂದು ಶೂದ್ರರೂ ಇಲ್ಲಿನ ಕೆಸರನ್ನೆತ್ತಲಿಲ್ಲ!"

"ಆಗ ಜಸ್ಟಿಸ್ ಪಾರ್ಟಿಯ ಮುಖಂಡರು ಯಾರಾಗಿದ್ದರಂತೆ?" ಎಂದು ನಾನು ಪ್ರಶ್ನೆಮಾಡಿದೆ.

"ನೀನು ಅರಿಯುವ ಕೂಸು! ಈ ಬ್ರಾಹ್ಮಣ-ಶೂದ್ರವಾದ ನನ್ನಷ್ಟೇ ಹಿಂದಿನ ವಾದ!"

"ಹಾಗಾದರೆ ನಿನ್ನ ಚರಿತ್ರೆಯನ್ನು ಮುಂದುವರಿಸಿ ಹೇಳು!"

"ಊರಿನ ಜನರೆಲ್ಲರೂ ಸಮಾನಾಧಿಕಾರದಿಂದ ನನ್ನ ನೀರನ್ನು ಬಯಸಿದ ಮೇಲೆ, ಪ್ರಾಣಿಕೋಟಿಗಳದೇನು ತಪ್ಪು ಎಂದು ಊರಿನ ಎಮ್ಮೆ ಕೋಣಗಳು, ಕಲ್ಲಿಲ್ಲದ ದಂಡೆಯನ್ನಿಳಿದು ನನ್ನಲ್ಲಿಗೆ ಬಂದವು."

"ನೀನು ವರುಣ ತೀರ್ಥನಾಗಿರಲು ನೆಗಳೆ (ಮೊಸಳೆ) ಮೊದಲಿಗೆ ಬರುವುದು ನ್ಯಾಯವಿತ್ತು; ಈ ಯಮವಾಹನರೇಕೆ ಮೊದಲು ಬಂದರು?"

"ಮಳೆಗಾಲದ ದಿನಗಳಲ್ಲಿ ಹಿಂದೆ ನೆಗಳೆಗಳೂ ಇಲ್ಲಿಗೆ ಬರುತ್ತಿದ್ದುವು."

"ಅನಂತರ?"

"ಅನಂತರ ನೋಡಯ್ಯಾ—ನಿನ್ನ ಊರಲ್ಲಿ ಕವಿಕುಲ ಹೆಚ್ಚಿತು. ಅವರು ನನ್ನ ತಿಳಿನೀರಲ್ಲಿ ಸೊಗ ಕಾಣಲಾರದೆ—'ಕುವಲಯ'ಗಳನ್ನು ತಂದು ನಟ್ಟರು. ಅವುಗಳಿಂದ ನನ್ನ ನೀರೇ ಮರೆಯಾಯಿತು. ಕೆರೆಯೆಲ್ಲ ನೈದಿಲೆ, ಕುಮುದಗಳಿಂದ ಆವರಿಸಲ್ಪಟ್ಟಿತು!"

"ಹಾಗಾದರೆ ಕುವಲಯ–ಕೇವಲ ಸಂಸ್ಕೃತ ಪದವಲ್ಲ!" ಎಂದು ವಿಸ್ಮಿತನಾದೆ ನಾನು.

"ಅದು ಹೇಗೆ?"

"ಆಗಲೂ ದಕ್ಷಿಣಭಾರತದಲ್ಲಿ ಹಿಂದೀ ಪ್ರಚಾರವಿತ್ತು! ರಾಮನೇ ಬಂದು ಅದನ್ನು ಮಾಡಿದ್ದರೂ ಮಾಡಿರಬಹುದು. ಅವನ ಜನರು, ಈ ಕೆರೆಯನ್ನೇ 'ಕುವಾ' ಎಂದೂ, ಅದನ್ನು 'ಲಯಿ'ಸಿದ ಗಿಡಗಳನ್ನು ಕುವಲಯ-ಎಂದೂ ಕರೆದಿರಬೇಕು" ಎಂದು ನನ್ನ ಆಭಾಸಾಶಾಸ್ತ್ರದ ವಿದ್ವತ್ತನ್ನು ತೋರಿಸಿದೆ.

"ಸರಿ, ಹೇಗೂ ಇರಲಿ; ನನ್ನ ನೀರು ಹಾಗಾಯಿತು. ಸೋಪಾನ, ಸ್ನಾನ ಘಟ್ಟಗಳ ಕಲ್ಲುಗಳು ಜಾರಿಹೋದುವು. ಆಗ ಬದಿಯ ಮಣ್ಣು ಜರಿಯದಂತೆ ಕೇದಗೆ ಗಿಡಗಳನ್ನು ನಟ್ಟರು. ಕುಮುದ-ಕೇದಗೆಗಳನ್ನು ಕಂಡು ನಿನ್ನೂರಿನ ಕವಿಗಳು ಹಿಗ್ಗಿದರು."

ಆಗ ನನ್ನೊಂದು ಹಳೆಯ ನೆನಹು ಮರುಕಳಿಸಿತು. ಆ ಕೇದಗೆ ಬನವಾಸಿಯಾದ ಸರ್ಪವೊಂದು, ಒಂದು ರಾತ್ರೆ ನನ್ನತ್ತೆಯೊಬ್ಬಳನ್ನು ಕಡಿದು ಸಾವಿಗೀಡು ಮಾಡಿದ ನೆನಪಾಯಿತು.

"ಅವರು ರಸಿಕರೇ?" ಎಂದು ಉದ್ಗರಿಸಿದೆ.

"ಸರಿ-ಆ ರಸಿಕರ ಯುಗವೂ ಸರಿಯಿತು. ಅನಂತರ ನಿಮ್ಮೂರ ಕೃಷಿಕರ ಯುಗ ಬಂದಿತು. ಅವರು ನನ್ನ ನೀರಿನಿಂದ ಬತ್ತದ ಪೈರನ್ನು ಬೆಳೆಸಿದರು; ತೀರ್ಥದ ನೀರೆಲ್ಲ ಬತ್ತಿದರೂ ಅವರಿಗೆ ತೃಪ್ತಿಯಾಗುತ್ತಿರಲಿಲ್ಲ."

"ಹೋಗಲಿ — ಅವರಾದರೂ ಕೆಸರು ತೆಗೆಯಬಹುದಿತ್ತಲ್ಲ?"

"ತಮ್ಮ ಹೊಲಕ್ಕೆ ಬೇಕಾಗುವಷ್ಟೇ ಕೆಸರನ್ನು ತೆಗೆದಾರು. ಅದಕ್ಕೂ ಮಿಗಿಲಾದರೆ ಕೆಸರು? ಅಲ್ಲದೆ ಕೆಸರು ನೀರುಗಳ ಸಮಪಾಕದಲ್ಲಿ ಗಾಳ ಹಾಕಿ ಮೀನು ಹಿಡಿಯಲು ತುಂಬ ಅನುಕೂಲವಾಗುತ್ತಿತ್ತು!"

"ಓಹೋ—ಹಾಗಿದ್ದರೆ ನಿನ್ನ ಜಲ, ನೆಲಗಳು ವಿಪ್ರಶೂದ್ರರೆಲ್ಲರಿಂದಲೂ ಪುನೀತಗೊಂಡಿತು! ಮುಂದೆ?"

"ಮುಂದೆ ಈಗಿನ ಯುಗ ಪ್ರಾಪ್ತಿಸಿತು. 'ನುಸಿ' ಯುಗವಿದು. ನಾನೀಗ ಆ ನುಸಿ, ಜೆಕ್ಕೀರಿಯುಗಳ ತವರು ಮನೆ. ಹಿಂದೆ ಯೋಗ—ಭೋಗಗಳ ತುರುಹಾಗಿದ್ದಂತೆ ಈಗ ರೋಗಗಳ ಆವಾಸ!"

ಸರಿ. ಸಮತಾವಾದದ ಆ ದಿನದಲ್ಲಿ ಅಲ್ಲಿ ನೆರೆದಿದ್ದ ಕಪ್ಪೆಗಳು ಒಮ್ಮೆಗೇ 'ಇಂಕಿಲಾಬ್ ಜಿಂದಾಬಾದ್'ಎಂಬ ಕ್ರಾಂತಿಮಯ ಕಹಳೆಯನ್ನು ಮೊಳಗಿಸಿದುವು. ಪ್ರಾಯಶಃ ಅವುಗಳಿಗೆ ಈ ಅನುಮಾನವೆದ್ದಿರಬೇಕು—"ಸ್ನಾನಕ್ಕೇ ಏಕೆ ಕೆರೆ ಮೀಸಲಾಗಬೇಕು? ಮುಸುರೆ ತಿಕ್ಕಬಾರದೇಕೆ? ಆರೋಗ್ಯ ಶಾಸ್ತ್ರದ ಇತರ ಚಟುವಟಿಕೆಗಳು ಅಲ್ಲಿ ನಡೆಯಬಾರದೇಕೆ? ಮನುಷ್ಯನಿಗೆ ಮಾತ್ರ ಕೆರೆಯಲ್ಲಿನ ಅಧಿಕಾರವೇ? ಎಮ್ಮೆ, ಕಪ್ಪೆ,ಕೇರೆಗಳಿಗೆಲ್ಲಾ ಸಮತಾವಾದದ ಪಾಲು ಸಲಬೇಡವೇ?"

ನಿಜ, ಇದೇ ಮಾದರಿಯ ಜೀವಾ--ಕ್ರೆಸಿಯ ಆದರ್ಶವಾಯಿತು ಆ ಕೆರೆ. ಸ್ವಯಂ ಸ್ಪಷ್ಟವಾಗತಕ್ಕ ಮಾತದು. ನನ್ನ ಊರಿನ ಹೆಸರು ಕೋಟ. 'ಕೂಟ' ಎಂದಿದ್ದ ಒಂದು ಕಾಲದ ಆ ಹೆಸರು ಈಗ ಕೋಟವಾಗಿದೆ. ನಮ್ಮ ಊರಿನ ಬ್ರಾಹ್ಮಣರು ಕೂಟ-ದವರು. ಅವರಿಗೆ ಮಠವಿಲ್ಲ,ಅಲ್ಲಿನ ಸ್ವಾಮಿಗಳ ತಕರಾರಿಲ್ಲ. ಹೀಗಿರಲು ಅವರ ಡೆಮಾಕ್ರೆಸಿಗೆ ಒಪ್ಪಿದ ಕೆರೆಯೊಂದು ಊರಲ್ಲಿರಬೇಡವೇ?

ಇದನ್ನು ಕಂಡು ನನ್ನಲ್ಲಿ ಭವಿಷ್ಯದ ಅನೇಕ ವಿಚಾರಗಳು ತಲೆಯನ್ನು ತಳಮಳಿಸತೊಡಗಿವೆ. ಈ ಡೆಮಾಕ್ರೆಸಿ,ಈ ಸಮತಾವಾದಗಳು ಈ ಯುಗದಲ್ಲೇ ಇಷ್ಟೊಂದು ಮುಂದುವರಿದಿರಲು—ಆ ತತ್ತ್ವಗಳು ಮತ್ತೂ ಮುಂದುವರಿದಲ್ಲಿ ಎಂಥ ರಾಜ್ಯ ಸೃಷ್ಟಿಗೊಳ್ಳಲಾರದು? ಎಂದು.

ಆಗಷ್ಟೆ, ಇಂಕಿಲಾಬ್ ಜಿಂದಾಬಾದ್ — ರಣಕಹಳೆ ತಿರುಗಿ ಊದಿತು. ನಾನು ಕುಳಿತಿದ್ದ ನೀರಿನ ಕುಣಿಯ ಗೋಡೆಗಳು, ದಸಕ್ಕನೆ ಜರಿದು ಒಳಕ್ಕೆ ಬಿದ್ದು ನನಗೆ ಕತ್ತಿನ ತನಕ ಗೋರಿ ಪ್ರಾಪ್ತಿಸಿತು. ಜಲದೇವತೆಯೋ ಗುಳುಗುಳು ಗೊಳ್ಳೆಂದು, ನೀರೊಳಗಿಂದ ಗಾಳಿಯ ಗುಳ್ಳೆಯಾಗಿ, ಮೇಲೆದ್ದು ಅಂತರ್ಧಾನವಾದಳು. ನಾನು ಭೀತಿಯಿಂದ ಎಚ್ಚೆತ್ತು, ಕೆಸರಿಂದ ಮೈವೆತ್ತು, ಆ ತಾಣದಿಂದ ಕಾಲುಕಿತ್ತು ಒಂದೇ ಸವನೆ ಮನೆಗೆ ಓಟ ಓಡಿದೆ. ಮನೆ ಬಾವಿಯ ನೀರಿನಿಂದ ನನ್ನ ಕೆಸರ್ಗವಚವನ್ನು ಕಿತ್ತು, ಮೋಕ್ಷ ತಾಳುವ ತನಕ, ನನ್ನ ಅಂತರಾತ್ಮನಿಗೆ ತಿಳಿವೇ ಬರಲಿಲ್ಲ.



# ಮಾಜಿ ಮೈಲಿಕಲ್ಲು

“ಬಿನ್ನಹಕೆ ಬಾಯಿಲ್ಲವಯ್ಯ ನನ್ನಿಂದ ಅನಂತ ಅಪರಾಧವಾಗಿರಲು” ಎಂದವರು ಪುರಂದರ ದಾಸರು. ನಾನೂ ಅದೇ ಸಾಲಿನವನು. ಆದರೆ ಪ್ರಕೃತ ನಾನು ಅವರಂತೆ ದ್ವೈತಿಯಲ್ಲವಾದರೂ ನನ್ನಿಂದ ಆದ ಅಪರಾಧ ಎರಡೇನೇ. ಅವು ‘ಅನಂತ’ವಲ್ಲವಾದರೂ ಅಪರಾಧ ಅಪರಾಧವೇ. ಅದೇನು ಎಂದು, ಈ ನನ್ನ ಅನುಭವಗಳನ್ನು ನಿಮಗೆ ಹೇಳುವ ಮೊದಲು, ಅವನ್ನೂ ಹೇಳಬೇಕು. ನನ್ನ ಮೊದಲನೆಯ ಅಪರಾಧ— ಮೋಟಾರು ಹುಟ್ಟುವ ಮೊದಲು ನಾನು ಹುಟ್ಟಿದ್ದು. ಎರಡನೆಯ ಅಪರಾಧ — ಮೋಟಾರು ಹೋಗದ ಹಾದಿಯಲ್ಲಿ ನಾನು ಹೋದದ್ದು. ಈ ಎರಡು ಕೆಲಸಗಳನ್ನು ಮಾಡಿದೆನೆಂದೇ ಮೈಲಿಕಲ್ಲಿನ ಮಹಾತ್ಮೆ ನನಗೆ ತಿಳಿದದ್ದು. ಮೋಟರಿನ ಮೇಲೆ ಅಮಲೇರಿ ಕುಳಿತವರಿಗೆ, ಸ್ವತಃ ನನಗೇ ಆದರೂ ಸರಿಯೆ, ಮೈಲುಕಲ್ಲು ಒಂದೇಯೆ, ಸರ್ವೆಕಲ್ಲೂ ಒಂದೇಯೆ. ನಡೆದು ಹೋಗುವ ಬಡಪಾಯಿಗಳಿಗೆ ಮಾತ್ರ ಮೈಲಿಕಲ್ಲೆಂಬುದು ಮಹಾನುಭಾವನಾಗಿ ಕಾಣಿಸಲೇ ಬೇಕು.

ಹಿಂದೊಮ್ಮೆ ನಾವು ಕೆಲವರು ಗೆಳೆಯರು ಸೇರಿ ಸಮೀಪದ ಒಂದೂರಿಗೆ ಕಾಲು ನಡಿಗೆಯಿಂದ ಹೊರಟೆವು. ಇಲ್ಲಿ ‘ಗೆಳೆಯರು’ ಎಂಬ ಮಾತೂ, ‘ಸಮೀಪ’ ಎಂಬ ಪದಗಳೂ ಬಲು ಮುಖ್ಯ. ನಾವು ಹೋಗಲಿರುವ ಪಾರಿ ಹಳ್ಳಿಯು ಗುಡ್ಡಗಾಡಿನದು; ಹೊರಟ ಊರು ‘ಕಮ್ಮಾರಶಿಲೆ;’ ಮುಟ್ಟಲಿರುವ ಊರು ‘ಜಡ್‌ಕಲ್ಲು’. ಅಂತು ಅಲ್ಲೊಂದು ಶಿಲೆ, ಇಲ್ಲೊಂದು ಕಲ್ಲು ಇದ್ದುದರಿಂದ—ಹಳ್ಳಿಗರು ಈ ಊರುಗಳ [illegible]

ಅಂತರ ಒಂಬತ್ತು ಮೈಲು ಎಂದು ಹೇಳಿದ್ದರು. ನಮಗೋ? ಎಳೆತನದ ಉತ್ಸಾಹ! ಬೆಳಗಿನ ಮೂರು ಘಂಟೆಗೆ ನಾವು ಕೈಯಲ್ಲಿ ಸೋಟೆ ಹಿಡಿದು ಹೊರಟೆವು. ಬೆಳಗಿನ ಸೂರ್ಯನ ಮುಸುಡನ್ನು ಜಡ್‌ಕಲ್ಲಿನಲ್ಲೇ ಕಾಣಬೇಕೆಂಬ ಹಂಬಲ ನಮಗೆ.

ಬೆಳಕು ಹರಿಯುವ ತನಕ ನಾವು ಹಾದಿಯನ್ನು ನಡೆದೆವು. ಒಂದು 'ಹಳ್ಳಿ' ಬಂದಿತು. 'ಹಳ್ಳಿ'ಯಲ್ಲ. ಒಬ್ಬ ಹಳ್ಳಿಗ ದೊರೆತ. "ಜಡ್‌ಕಲ್ಲಿಗೆ ದೂರ?—" ಎಂದೆವು. ಬರಿಯ "ಮೂರು ಹರದಾರಿ—" ಎಂದನು ಆತ. ಮುಖ ಮುಖ ಕಂಡೆವು ನಾವು. ಒಂಬತ್ತು ಮೈಲಿನಲ್ಲಿ ಮೂರು ತಾಸು ನಡೆದು ಉಳಿದುದು 'ಮೂರು ಹರದಾರಿ' ಮಾತ್ರ ಎಂಬ ಲೆಕ್ಕ ಕೇಳಿ ನಮಗೆ ಅಸಮಾಧಾನವಾಯಿತು. ತಿರುಗಿ ನಡೆದೆವು. ಸೂರ್ಯನ ಎಳೆಯ ಅಲ್ಟ್ರಾವಾಯಿಲೆಟ್ ಕಿರಣಗಳನ್ನು ನುಂಗುತ್ತ—ಕಾಡು ನುಗ್ಗಿ, ತೋಡು ಇಳಿದು, ಗುಡ್ಡ ಸರಿದು, ದಿಡ್ಡ ಜಾರಿ ಇನ್ನೂ ಜಾವ ಸಮಯ ನಡೆದು ಒಂದು ಹಳ್ಳಿಗೇನೆ ಬಂದೆವು. "ಜಡ್‌ಕಲ್ಲಿಗೆ ಯಾವುದು ದಾರಿ?" ಎಂದು ಊರವರನ್ನು ಕೇಳಿದೆವು. "ಇದೇ ಮುಂದಿನದು" ಎಂದರು ಅವರು. ಧೈರ್ಯವಾಯಿತು. "ಎಷ್ಟು ದೂರ?" ಎಂದು ಕೇಳಿದೆವು. "ಮೂರೇ ಕೂಗು'—ಎಂದು ಉತ್ತರ ಬಂದಿತು. ಸ್ಥೈರ್ಯ ಹುಟ್ಟಿತು; ಉಸಿರು ಬಂದಿತು. ಇಷ್ಟರಲ್ಲಿ ದೂರ ನಡೆದು ದಣಿದ ಕುರಿಗಳಂತಿದ್ದ ನನ್ನ ಗೆಳೆಯರೆಲ್ಲ, ಆಡಿದರೆ ರೇಗುವ ಹುಲಿಗಳಾಗಿದ್ದರು. ಆದರೂ ನಮ್ಮಲ್ಲಿ ಗೆಳೆತನ ತಿರುಗಿ ಬೆಸೆಯುವ ಭರವಸೆ ಕಂಡಿತು. ತಿರುಗಿ ಸಾಗಿದೆವು. ಹೊತ್ತು ನೆತ್ತಿಗೇರುವ ತನಕ, ತುಸು ನೆತ್ತಿಗೇರಿದ ಮೇಲೆಯೂ ನಡೆದೆವು. ಜಡ್‌ಕಲ್ಲು ಬಾರದೆ ಇರಲಿಲ್ಲ; ಬಂತೇ ಬಂತು. ಮೂರು ಕೂಗಿನ ದೂರದಲ್ಲಿದ್ದ ಅದು ಮೂರು ತಾಸು ಸಂದ ಬಳಿಕ ಮಾತ್ರವೇ ಬಂದಿತು! ಅಂತು

–"ಮೈಲಿಕಲ್ಲಿಲ್ಲದ ಹಾದಿಯಲ್ಲಿ ನಡೆಯುವವರು ಮತಿಹೀನರು" ಎಂದು ನಾವೆಲ್ಲ ತೀರ್ಮಾನಿಸಿದೆವು.

ಇನ್ನೊಮ್ಮೆ ಹೋದದ್ದು ಅಂಥ ಕಲ್ಲಿಲ್ಲದ ದಾರಿಯಲ್ಲಿ ಅಲ್ಲವೇ ಅಲ್ಲ. ನಮ್ಮ ರಾಜಧಾನಿಯಿಂದ ಇನ್ನೊಂದು ಊರಿಗೆ; ರಾಜ ಮಾರ್ಗ ವಿತ್ತು.(ಕೊಡಗು ಅರಸರು) ದಾರಿಯುದ್ದಕ್ಕೂ ಮೈಲಿಕಲ್ಲುಗಳನ್ನು ನಿಲ್ಲಿಸಿದಊರು. ಅಲ್ಲಿ ಕುರುಡನೂ ಲೆಕ್ಕ ತಪ್ಪುವಂತಿಲ್ಲ. ಮುದ್ರ್ಯಾವಿಗಳಾದ ನಾವು ರಾತ್ರಿಯೇ ಪಯಣ ಹೊರಟೆವು. ಹಾದಿಯ ಮೈಲು ಕಲ್ಲುಗಳಿಗೆ ರೇಡಿಯಂ ಲೇಪ ಇಲ್ಲದುದರಿಂದ, ದೂರ ತಿಳಿಯಲಿಲ್ಲ. ಬೆಳಗಾಗುವಾಗ ನಾವು ಸೇರಿದ ಊರು—ನೀರು, ನೆರಳುಗಳೆರಡೂ ಇಲ್ಲದ ಒಂದು ಪ್ರದೇಶವಾಗಿತ್ತು.

'ಅಯ್ಯಾ, ನೀರಿರುವ ಊರಿಗೆ ಇಲ್ಲಿಂದ ದೂರ ಎಷ್ಟು?' ಎಂದು ಜನರನ್ನು ಕೇಳಲೇ? ನಾಚುಗೆಯಾಗಬೇಕು. ಕೊನೆಗೆ ನೆನಪಿಂದ ಹಾದಿ ಕವಲೊಡೆವ ಒಂದು ತಾಣೆಯನ್ನು ಸ್ಮರಿಸಿ, ಆ"ಕವಲು ದಾರಿಗೆ ಎಷ್ಟು ಮೈಲಿ ದೂರವಿದೆ" ಎಂದು ಕೇಳಲು ಬಯಸಿದೆವು. ಆದರೆ ಕೇಳಬೇಕು ಯಾರನ್ನು?" ಮುಂದಿ ಸಿಗುವ ತನಕವಾದರೂ ನಾವು ನಡೆಯಬೇಡವೇ? ಅದೂ ವ್ಯರ್ಥವಾಯಿತು. ರಾತ್ರಿಯ ಊಟ ಕರಗಿ, ನಿದ್ರೆ ಅರಗಿ, ಅರೆ ಮರುಳಾಗಿತ್ತು ನಮ್ಮ ಮೈಮನಸ್ಸು. ಹೋಗಲಿ, ಮುಂದಿನ ಮೈಲಿಕಲ್ಲಿನ ಬಳಿ ಸೇರಿದರೆ, ಕವಲು ದಾರಿಗೆ ಎಷ್ಟು ಮೈಲಿಯೆಂದು ತಿಳಿಯುತ್ತದೆ. ಅಲ್ಲಿಂದ ಮುಂದೆ ನಮ್ಮ ಗುರಿಗೆ ಬರಿಯ ನಾಲ್ಕೇ ನಾಲ್ಕು ಮೈಲು ಅನ್ನುತ್ತಾರೆ. ಹೇಗಾದರೂ ಮೈಲಿಕಲ್ಲಿರುವ ಹಾದಿಗಳಲ್ಲವೆ—ಎಂದು ಯೋಚಿಸಿ ಅಲ್ಲಿಯ ತನಕವೂ ನಡೆದೆವು. ಅಲ್ಲ, ಅಲ್ಲಿಯ ತನಕ ಕಾಲನ್ನು ಎಳೆದುಕೊಂಡು ಹೋದೆವು. ಹಾದಿಯಲ್ಲಿ ನಮ್ಮ ಕಣ್ಮುಂದೆ

ಫರ್ಲಾಂಗುಗಳು ೩, ೪, ೫, ೬--ಎಂದು ಒಂದೊಂದಾಗಿ ಮುಗುಚಿದರೆ ಏನು ಫಲ? ಪಯಣಿಗನ ಮಾನ ಸಲುವುದು ಮೈಲಿಕಲ್ಲಿಗೇ. ನಾವು ನಡೆದು, ಬಂದು ನಿಂತುದು ೧೯ನೇ ಮೈಲಿಕಲ್ಲಿನ ಸಮ್ಮುಖದಲ್ಲಿ! ಆ ಲೆಕ್ಕದಂತೆ ಕವಲು ದಾರಿಗೆ ಇನ್ನೂ ೨—೩ ಮೈಲಿ ಇರಬೇಕು. ಅಲ್ಲಿ ಹೋಗಿ ವಿರಮಿಸುವ, ಎಂದರೆ ನಡೆಯಲು ಕಾಲು ಬರಬೇಡವೇ? ರೇಗಿ ನಮ್ಮಲ್ಲಿ ಒಬ್ಬೊಬ್ಬರು ಆ ತಾವನ್ನು ಶಪಿಸಿ, ಹೊಸತಾಗಿ ಸುಣ್ಣ ಬಳಿದ ಆ ಕಲ್ಲಿನ ಮುಸುಡಿನ ಮೇಲೆಯೇ ತಮ್ಮ ಪಾದಪಂಕಜವನ್ನೂರಿದರು. ಅಲ್ಲಿಂದ ಜೋಲು ಮೋರೆ ಮಾಡಿಕೊಂಡು ನಡೆದೆವು. ೨-೩ ಮೈಲನ್ನಲ್ಲ, ನಾಲ್ಕು ಮೈಲು ದೂರ ನಡೆದೆವು. ಕವಲು ದಾರಿ ಬಂದಿತು. ಆದರೆ ಅಲ್ಲಿ ಮೈಲಿಕಲ್ಲು ಕಾಣಿಸಲಿಲ್ಲ! ಬೇತಾಳನ ಹಾಗೆ ನಿಂತ ಬೇರೆ ಕಲ್ಲೊಂದು ಕಾಣಿಸಿತು. ಅಲ್ಲಿನ ಆ ಕಲ್ಲು ನಿಂತಿದ್ದರೇನು, ಕುಳಿತಿದ್ದರೇನು. ಅಲ್ಲಿ ಕುಡಿಯಲು ನೀರೇ? ತಿಂಡಿಯ ಹೋಟೆಲೆ? ಮುರುಕು ಛತ್ರವೇ? ಹೋಗಲಿ, ವಿಶಾಲವಾದ ಒಂದು ಆಲದ ಮರವಾದರೂ ಇರಬೇಡವೇ? 'ಸಮ್ಮರಿ'ನ ಸೂರ್ಯ ತನ್ನ ಸೋಮಾರಿತನ ಬಿಟ್ಟು ನಮ್ಮನ್ನು ಕೊರೆಯುತ್ತಿರುವ ಆ ವೇಳೆಗೆ ಯಾರೇನು ಮಾಡಬೇಕು? ಹೋಗಲಿ— ಇಲ್ಲಿ ಕೈಕಂಬವಾದರೂ ಇರಬೇಕು, ಇಲ್ಲಿಂದ ನಾವು ಬಿಟ್ಟು ಬಂದ ಊರಿಗೆ ಎಷ್ಟು ದೂರ ಎಂದಾಗಲಿ, ಹೋಗಲಿರುವ ಊರಿಗೆ ಎಷ್ಟು ದೂರ ಇದೆಯೆಂದಾಗಲಿ ತಿಳಿಯಬೇಕು ಎಂದರೆ--ಕಂಬವಿತ್ತು. ಆದರೆ ಅದರ ಕೈಹಲಗೆಗಳನ್ನು ಕಿತ್ತು ಯಾರು ಒಯ್ದಿದ್ದರೋ!

"ಥೂ — ಈ ಮೈಲಿಕಲ್ಲಿಗೇನು ಸಾವು ಬಂದಿತು? ಮಡಿಕೇರಿಗೆ ಹೋಗುವ ಬಸ್ಸುಯಾಕೆ ದಾರಿತಪ್ಪಿ ಯಾದರೂ ಇಲ್ಲಿಗೆ ಬರಬಾರದಿತ್ತು? ಅಡ್ಡನಡ್ಡದಂಥ ಮೂರು ಮನೆಗಳಿರುವ ಊರಿನಲ್ಲಿ ಹದಿನಾರು

ಹೋಟೆಲು ತೆರೆಯುವ ಉದ್ದಾರಿಗಳಿರುವಾಗ ಈ ತಾವಿನಲ್ಲಿ ಬರಿ ನೀರು ಕೊಡುವ ಅರವಟ್ಟಿಗೆಯನ್ನಾದರೂ ತೆರೆಯುವಷ್ಟು ಬುದ್ಧಿಯು ಬರಬಾರದಿತ್ತೇ" ಎಂದೆಲ್ಲಾ ಶಪಿಸಿದೆವು. ನನ್ನ ಗೆಳೆಯರೋ? "ನೀನು ಬರುತ್ತೀಯೋ ಮುಂದಕ್ಕೆ, ಹೇಗೂ ಹದಿನೆಂಟು ಮೈಲಿ ನಡೆದಾಯಿತು. ಇನ್ನೂ ಆರೆಂಟು ನಡೆಯುವ; ಹೋಗಿ ಗೊತ್ತನ್ನಾದರೂ ಸೇರಬಹುದು. ಈ ದಂಡಕಾರಣ್ಯದಲ್ಲಿ ಕಾದು ನಿಂತರೆ ತಿರುಗಿ ಕಾಲು ಕೀಳಲು ಬರಲಿಕ್ಕಿಲ್ಲ" ಎಂದರು.

ನಾನೇ? ಕಾಲು ಕೀಳುವುದಿರಲಿ, ಅಲ್ಲಿಂದ ನನ್ನ ಜೀವ ಎಬ್ಬಿಸುವುದೂ ಅಸಾಧ್ಯದ ಮಾತಾಗಿತ್ತು. "ನಾನು ಸತ್ತಾಯಿತೆಂದು ತಿಳಿಯಿರಿ" ಎಂದೆ. ಅವರೆಲ್ಲ ರೇಗಿದರು. "ಇಲ್ಲಿ ಸತ್ತವರನ್ನು ಸುಡುವವರೂ ಇಲ್ಲ" ಎಂದರು. ಅವರಿಗೆಲ್ಲ ಉರಿ ಬಿಸಿಲಿನ ಭೀತಿ, ನೀರಡಿಕೆ; ಕಾದ ನೆಲ ಮತ್ತಷ್ಟು ಕಾಯುವವರೆಗೆ ನಿಂತರೆ ಪಯಣವೇ ದುಸ್ಸಾಧ್ಯವಾದೀತೆಂದು ಭಯ. "ನಾವು ಮುಂದೆ ಹೋಗಿ ತಂಪಿರುವಲ್ಲಾದರೂ, ನೀರಿರುವಲ್ಲಾದರೂ ನಿಂತಿರುತ್ತೇವೆ" ಎಂದು ಹೇಳಿ, ಅವರು ಮುಂದಕ್ಕೆ ಸಾಗಿಯೇ ಹೋದರು. ನಾನು ಇದ್ದಲ್ಲೇ ವೀರ ಸತ್ಯಾಗ್ರಹಿಯಂತೆ ಉಳಿದುಬಿಟ್ಟೆ.

ಬಿಸಿಲು ಏರುತ್ತ ಬಂದಿತು; ನೆಲ ಸುಡುತ್ತ ಸರಿಯಿತು. ಹಸಿವು ನೀರಡಿಕೆಗಳು ಹದ್ದಿಲ್ಲದಾದುವು. ನಾನು ತೆಪ್ಪಗೆ ಅಲ್ಲೇನೆ ಕುಳಿತುಕೊಂಡೆ. ಕವಲು ದಾರಿಗೆ ಸಾಕ್ಷಿಯಾಗಿ, ನಿಲ್ಲಿಸಿದ ಒಂದು ಕಲ್ಲಿನ ಕಂಬಕ್ಕೆ ಒರಗಿ ಕುಳಿತುಕೊಂಡೆ. ಕಣ್ಣು ಬಾಡಿತು. ಅಲ್ಲೇ ತೂಕಡಿಕೆಯೂ ಬಂದಿರಬೇಕು. ಅದರಿಂದ ಎಚ್ಚರಗೊಂಡು "ಅರೆ! ಕುತ್ತಿಗೆಯಿಂದ ಉದುರಿ ಬೀಳುತ್ತಿರುವ ನನ್ನ ಕತ್ತೆನ್ನೆಲ್ಲಿ ಇರಿಸಲಿ" ಎಂದೆ.

'ನನ್ನ ತಲೆಯ ಮೇಲೆ' ಎಂದು ಎಲ್ಲಿಂದಲೋ ಉತ್ತರ ಬಂದಿತು.

'ಯಾರವರು ಉತ್ತರಿಸಿದವರು? ನನ್ನ ಗೆಳೆಯರಲ್ಲಾರಾದರೂ ಅಡಗಿ ನನ್ನನ್ನು ಅಣಕಿಸುತ್ತಿರಬಹುದೇ?' ಎಂದು ಆಚೀಚೆ ನೋಡಿದೆ. ಯಾರೂ ಇಲ್ಲ. ಮಾತು ಕೇಳಿದ್ದು ನಿಜ. ನಾನೊರಗಿದ ಕಲ್ಲಿನ ಹಿಂದೆ ಯಾರಾದರೂ ಅಡಗಿರಬಹುದೇ ಎಂದು ಹಿಂತಿರುಗಿ ನೋಡಿದೆ. ಕಲ್ಲಿನ ಬೆನ್ನು ಅಲ್ಲಿಂದಲೇ ಕಾಣಿಸದಷ್ಟು ದೊಡ್ಡದಿತ್ತು. ಹೀಗಾಗಿ ನನ್ನ ಶರೀರವನ್ನು ನಾನೇ ಹೊತ್ತುಕೊಂಡು ಅದರ ಹಿಂದುಗಡೆ ಹೋದೆ! ಯಾರೂ ಇರಲಿಲ್ಲ. ಗಾಬರಿಯಾಗದಿದ್ದೀತೇ? ಹಸಿದ ನನಗೆ ಕೋಪ ಬಾರದೆ ಇದ್ದೀತೆ?

'ಯಾರ ಹೊಟ್ಟೆಯ ಸಂಕಟ ಯಾರಿಗೇನು ತಿಳಿಯುತ್ತದೆ' ಎಂದೆ ನಾನು.

'ನನಗೆ ತಿಳಿಯುತ್ತದೆ, ಅದಕ್ಕೇನೆ ನಾನು ನಿಂತಿರುವವ' ಎಂದು ಆ ಕಲ್ಲೇ ಆ ವೇಳೆಗೆ ನನ್ನನ್ನು ಉತ್ತರಿಸಬೇಕೆ?

ಈಗಾಗಲೇ ಶಿಲೆಗಳೊಡನೆ ಮಾತನಾಡಿ ಪಂಡಿತನಾದ ನಾನು, ನನ್ನ ಸರ್ವ ಅನುಭವಗಳನ್ನು ಸ್ಮರಿಸಿ—"ಹೂಂ, ನೀನು! ಏ ನಿಂತ ಕಲ್ಲೇ, ನಿನಗೇನು ನನ್ನ ಸಂಕಟ ತಿಳಿದೀತು? ನನಗಂತು ನನ್ನ ತಲೆಯೇ ಹೊರೆಯಾಗಿದೆ ರಾತ್ರಿ ನಿದ್ರೆಯಿಲ್ಲದೆ."

'ಅದಕ್ಕೇನೆ-ನನ್ನ ತಲೆಯ ಮೇಲೆ ಅದನ್ನಿರಿಸು ಎಂದೆ. ನಾನು ಇಲ್ಲಿರುವುದೇ ಪರರ ತಲೆಹೊರೆಯನ್ನು ಹೊರಲು' ಎಂದಿತು ಆ ಕಲ್ಲು.

ನನಗೆ ನಗು ಬಂದಿತು. ಊರಿನ ದಾರಿಯ ಜನರು ತಮ್ಮ ಹೊರೆಯನ್ನು ಕ್ಷಣ ಕಾಲ ಇಳಿಸಿ ಉಸ್ಸೆಂದು ನಿಲ್ಲಲು ನಿಲ್ಲಿಸಿದ ಆ ಕಲ್ಲು — ಪರೋಪಕಾರಿಯೆಂಬುದಕ್ಕೆ ಅವರ ವಯೋವೃದ್ಧ ನುಣ್ಣಗಿನ ತಲೆಯೇ

ಸಾಕ್ಷಿ. ಅದರ ತಲೆಯ ಮೇಲೆ ಕೈಯಾಡಿಸಿದೆ. ಶಿಲೆಯಾಗಿದ್ದರೂ ಶಿವ ಲಿಂಗದಂತೆ ಗೋಲಾಗಿತ್ತು. "ನೀನು ಯಾವುದಾದರೊಂದು ಗುಡಿ ಕಲ್ಲಾಗಿರಲು ಯೋಗ್ಯನಾಗಿದ್ದೀ" ಎಂದೆ.

"ಆಗಿದ್ದೆ ಅದೊಂದು ಕಾಲದಲ್ಲಿ. ಶಿವ ಮಂದಿರದಲ್ಲಿ ಮಾತೃ ಲಿಂಗವಾಗಿ ನಿಂತವ ನಾನು. ಯಾರೋ ವಿಧರ್ಮಿಗಳು ನನ್ನನ್ನು ಕೆಡ ವಿದರು. ನಾನು ಗುಡಿ ಕಲ್ಲಾಗಿದ್ದಷ್ಟು ದಿನ, ನನ್ನ ಪುಣ್ಯವೆಂಥದಿತ್ತು! ನನಗೆ ನಿತ್ಯ ರುದ್ರಾಭಿಷೇಕ. ಊರಲ್ಲಿ ಮಳೆ ಬಾರದೆಹೋದರೆ ನನಗೆ ೧೦೦೦ ಎಳನೀರುಗಳ ಅಭಿಷೇಕ—ಮಳೆ ಬರಲೆಂದು. ಮಳೆ ಬಂದು ಮದುವೆ, ಮುಂಜಿ ಕೆಡುವಂತಿದ್ದರೆ-ತಿರುಗಿ ಮಳೆ ಬಾರದಿರಲು ೧೦೦೦ ಎಳನೀರುಗಳ ಅಭಿಷೇಕ!"

"ಅಯ್ಯೋ, ನಿನಗೆ ಎಳನೀರಿನ ತಂಪಿನಿಂದ ಶೀತವಾಗಿರಲಿಕ್ಕೂ ಸಾಕು. ಕೈಲಾಸದ ಶಿವನಿಗೆ ಹಿಮದಿಂದ ತಂಪಾದರೆ, ನಿನಗೆ ಎಳನೀ ರಿನ ತಂಪು. ಪುಣ್ಯಾತ್ಮ-ಈಗ ನನಗೆ ಒಂದೇ ಒಂದು ಎಳನೀರು ಕೊ ಟ್ಟರೆ ನೂರು ರೂಪಾಯಿ ಕೊಟ್ಟೇನು."

"ನನಗೆ ಆಗ ಇಂಥ ಶೀತಾಭಿಷೇಕಗಳಿಂದ ಬೇಸರವಾಗಿ ಹೋ ಗಿತ್ತು."

ಅದೇಕಯ್ಯ, ಎಳನೀರಿಂದ ಬೇಸರವೇ? ಪರಶುರಾಮ ಕ್ಷೇತ್ರದ ವರಿಗೆ, ಎಳನೀರು ಕುಡಿದು ಚಳಿಯಾಗುವ ಕಾಲ ಒಂದೇನೆ; ಅದು ಮಲೇರಿಯ ಕಾಲದಲ್ಲಿ."

"ಹಾಗಲ್ಲವಯ್ಯ, ಒಂದೇ ಬಾರಿ ಇಬ್ಬರು ಭಟ್ಟರು ೧೦೦೦,೧೦೦೦ ಎಳನೀರನ್ನು ನನ್ನ ತಲೆ ಮೇಲೆ ಹುಯಿದು—'ಮಳೆ ಬರಲಿ,' 'ಮಳೆ ಬಾರದಿರಲಿ' ಎಂದು ಕೂಗಿದರೆ ಎಂಥ ಉಭಯಸಂಕಟವಾಗಬೇಡ

ನನಗೆ! 'ಹೇಗೆ ಈ ಕಾಟ ತಪ್ಪೀತು, ಎನಿಸದೇನು? ಅಂತು ಒಂದು ದಿನ ನಾಸ್ತಿಕನೊಬ್ಬನು ನನ್ನ ಗುಡಿಯನ್ನು ಸುಟ್ಟನು. ನನ್ನನ್ನು ಎಳೆದು ಅಂಗಳಕ್ಕೆ ಎಸೆದನು."

"ಇಲ್ಲಿಗೆ ಎಂದು ತಮ್ಮ ಆಗಮನವಾಯಿತು?"

"ಹಿಂದೊಮ್ಮೆ, ಪಂಜ ಸೀಮೆಯವರಿಗೂ, ಬೆಳ್ಳಾರೆ ಸೀಮೆಯವರಿಗೂ ವಾದವೆದ್ದು ಅವರೊಳಗಣ ಗಡಿ ನಿಶ್ಚಯವಾಗಬೇಕಾಯಿತು. ಆಗ ಇಲ್ಲಿ ಸಂಚಾರದ ಕಾಲುದಾರಿಗಳೂ ಇರಲಿಲ್ಲ. ಇದು ತುಸು ಏರಿನ ನೆಲವೆಂದು,ಗುಡಿಕಲ್ಲಾದ ನನ್ನನ್ನು ಇಲ್ಲಿ ಗಡಿಕಲ್ಲಾಗಿ ಮಾಡಿ ನೆಟ್ಟರು."

"ಹೋ, ನೀನು ಗಡಿಕಲ್ಲೇನು? ಅಂತು ಎಳನೀರಿನ ಕಾಟ ತಪ್ಪಿತಲ್ಲ."

"ಬದಲು ಆ ಶೀತವನ್ನೆಲ್ಲ ಕಕ್ಕಿಸುವಂಥ ಉರಿಬಿಸಿಲು ಪ್ರಾಪ್ತವಾಗಲಿಲ್ಲವೇ? ಎಷ್ಟು ಬೇಸಗೆ, ಮತ್ತೆಷ್ಟು ಮಳೆಗಳು ನನ್ನ ಮೇಲೆ ಸುರಿದುವು. ನನ್ನ ತಲೆಯ ತುಣುಕೆಷ್ಟು ಸಿಡಿದು ಹಾರಿವೆಯೆಂದು ಬಲ್ಲೆಯಾ?"

"ಆದರೂ ನಿನ್ನ ತಲೆಸೀಮೆಗೆ ವಯೋವೃದ್ಧ ಸ್ವಾಮಿಜೀ, ಮುಲ್ಲಾಗಳಿಗಿರುವ ನಯನುಣುಪುಗಳಿವೆ. ಇರಲಿ, ಮುಂದಿನ ವಿಚಾರಹೇಳು."

ಅಂದಿನ ಅರಸುತನಗಳು ಹಾರಿಹೋದುವು. ನನ್ನ ಗಡಿಯನ್ನು ಮೂರಿ ಸೀಮೆ ಬೆಳೆಯಿತು. ನನ್ನ ಮುಂದಕ್ಕೆ ಪುತ್ತೂರು ಸೀಮೆ, ಸುಳ್ಯ ಸೀಮೆಗಳಿಂದ ಬರುವ ಕಾಲು ದಾರಿಗಳು ಬಂದು ಕವಲುಗೂಡಿದುವು. ಈ ಗುಡ್ಡದ ನೆತ್ತಿಯ ಮೇಲಿರುವ ನನ್ನನ್ನು ಅಂದು ಯಾರೋ 'ನೆತ್ತಿಕಲ್ಲು' ಎಂದು ಕರೆದರು. ಬಾಯಿ ತೊದಲಿದವರು ಅದನ್ನೇ 'ನಿಂತಿಕಲ್ಲು' ಎಂದರು."

"ಕಲ್ಲು ನಿಂತಿದ್ದರೇನು, ಕುಳಿತಿದ್ದರೇನು?"

"ಕುಳಿತಿದ್ದರೆ ಈ ವ್ಯಥೆ ಇಲ್ಲವಯ್ಯ. ನಿಂತುದನ್ನು ಕಂಡು, ಹೊರೆ ಹೊರುತ್ತಿರುವ ದಾರಿಗರೆಲ್ಲ ತಮ್ಮ ಹೊರೆಗಳನ್ನು ನನ್ನ ಮೇಲೆ ಹೇರಿ, ತಮ್ಮ ಬೆವರನ್ನೂ ನನ್ನ ಮೈಗೆ ಒರಸಿ ಹೋಗುವರು. ಅಂದಿನಿಂದ ನನ್ನ ತಲೆ ನುಣ್ಣಗಾಗತೊಡಗಿತು; ಮೈ ನಯವಾಯಿತು; ಈಗ ಸವೆಸವೆದು ತಲೆಯೇ ಇಲ್ಲವಾಗಿದೆ. ಅದಕ್ಕೇನೆ, ನಿನ್ನ ತಲೆಯನ್ನೇ ನನ್ನ ಕತ್ತಿಗೆ ಸೇರಿಸಿಬಿಡು ಎಂದು ಕೇಳಿದುದು."

ನನಗೆ ಅಂಥ ವ್ಯಕ್ತಿಚಿತ್ರ ನೆನೆದು ನಗು ಬಂದಿತು. ನನ್ನ ತಲೆಯನ್ನು ಅದಕ್ಕೇರಿಸಿದ್ದಲ್ಲಿ ಅದರ ಯೋಗ್ಯತೆಗೆ ಕುಂದೇ, ನನ್ನ ಮೇಲ್ಮೆಗೆ ಕಡಮೆಯೇ—ಎಂಬ ವಿಚಾರದಲ್ಲಿ ನಾನು ಮಗ್ನನಾದೆ.

ಹೋಗಲಿ, ಈ ವಿಚಿತ್ರ ವ್ಯಕ್ತಿಯನ್ನು ನೋಡುವ ಎಂದು ಆ ನೆತ್ತಿಕಲ್ಲಿಗೆ ಸುತ್ತು ಬಂದೆ. ಅದರ ಮೈಗೆ ನಯವಾದ ನಡುವೊಂದು ಪ್ರಾಪ್ತಿಸಿತ್ತು!

"ಇದೇನು, ನಿನ್ನ ಸಿಂಹಕಟಿ?" ಎಂದು ಕೇಳಿದೆ.

"ಏನೆಂದರೆ! ಈ ಪ್ರಾಂತದಲ್ಲಿ ಮೇಯಲು ಬಂದ ಎಮ್ಮೆ ಕೋಣಗಳು ತಮ್ಮ ಮೈಯನ್ನು ನನ್ನ ಮೈಗೆ ಉಜ್ಜಿ ಉಜ್ಜಿ ಈ ಕಟಿಯನ್ನು ಕಟೆದುವು—"

"ಹೋಗಲಿ, ನೀನು ಒಳ್ಳೆಯ ನೆರಳು ನೀರುಗಳು ಇರುವಲ್ಲಿ ನಿಂತಿದ್ದರೆ, ಶತಮಾನಗಳ ಕಾಲದ ಮನುಷ್ಯ ಮೃಗರುಗಳ ಸ್ನೇಹದಿಂದ ಸವೆದು ನುಣ್ಣವಾಗುತ್ತಿದ್ದೆ. ಈ ತಾವು ನಿರಾಕರ್ಷಣೀಯವಾದುದರಿಂದ ಯಾರೂ ನಿನ್ನನ್ನು ಬಲುಹೊತ್ತು ದಣಿಸಲಾರರು, ಅಲ್ಲವೇ!"

"ಹಾಗೆ ದಣಿಸಿಲ್ಲವಾದರೂ ಈ ಅಪಮಾನ ಸಹಿಸುವವರಾರು?"

"ಇಲ್ಲಿ ಅಪಮಾನವೇನು ಬಂತು?"

"ಬಂದವರು ಇಲ್ಲೇ ನಿಂತು ಎಲೆಯಡಿಕೆಯನ್ನು ತಿನ್ನುತ್ತಾರೆ; ಬೆರಳಲ್ಲಿ ಮಿಕ್ಕಿದ ಸುಣ್ಣವನ್ನು ನನ್ನ ಮುಸುಡಿಗೆ ಬಳೆಯುತ್ತಾರೆ. ಕೆಲವರಿಗೆ ಮಾಡಿದ ಉಪಕಾರ ಕ್ಷಣ ಕಾಲವೂ ಮನದಲ್ಲಿ ನಿಲ್ಲದೆ, ಮುಖಕ್ಕೆ ತುಂಬುಲ ಉಗುಳಿ ಹೋಗುತ್ತಾರೆ! ಏನೋ, 'ಕಾಲೇ ವರ್ಷತು ಪರ್ಜನ್ಯ'ವಾಗಿ ನನ್ನ ರೂಪ ನೋಡುವಂತಿದೆ; ಇಲ್ಲವಾದರೆ ತಾಂಬೂಲ ಸುಣ್ಣಗಳ ಕೆಂಪು ಬಿಳಿ ಲೇಪನಗಳಿಂದ ನಾನು ಐಯ್ಯಂಗಾರರ ಗುಡಿಯ ಗೋಡೆಗಳಿಗಿಂತ ವಿಕಾರವಾಗುತ್ತಿದ್ದೆ!"

"ಈ ಕವಲು ದಾರಿಯಲ್ಲಿ ಒಂದು ಮೈಲಿಕಲ್ಲು ಇದೆಯಂತಲ್ಲ? ಪುತ್ತೂರಿಂದ ಇದು ಹದಿನಾರೋ ಹದಿನೆಂಟೋ ಮೈಲಿ ದೂರ ಇದೆಯೆಂದರಲ್ಲ. ನಾವು ನಂಬಿ ನಡೆದು ನಡೆದು, ಕಾಲು ಚರ್ಮ ಸವೆಸಿದ್ದಾಯಿತು. ಆ ಕಲ್ಲೆಲ್ಲೂ ಕಾಣಿಸಬಾರದೇ?"

"ಅಯ್ಯೋ ಸ್ವಾಮಿ, ಆ ಪ್ರಾಪ್ತಿಯೂ ನನಗಿತ್ತು!"

"ಅಂದರೆ!"

"ನನ್ನ ಅಗಲವಾದ ಎದೆಯನ್ನು ನೋಡಿ ಮೆಹರ್ಬಾನ ಸರಕಾರದವರು ನನ್ನ ಮುಸುಡಿಗೇನೆ ೧೮ ಎಂದು ಅಂಕೆ ಬಳೆದ ಒಂದು ದಿನವಿತ್ತು. ಆದರೆ, ಒಂದು ದಿನ ಯಾರೋ ನಾಜೂಕಿನ ದೊರೆಗಳು ಕುದುರೆಯ ಮೇಲೆ ಹೋಗುವಾಗ—ಉಳಿದ ಮೈಲಿಕಲ್ಲುಗಳೊಡನೆ ನಾನು ಸಮನಾಗಿ ಬೆರೆಯೆನೆಂದು, ನನ್ನ ಮುಂದೆ ಬೇರೊಂದು ಮರಿಕಲ್ಲನ್ನು ನೆಟ್ಟರು. ಅದರಲ್ಲಿ ೧೬ ಎಂದು ಕೆತ್ತಿದರು."

"ಈಗೆಲ್ಲಿ ಆ ಕಲ್ಲು?"

"ಆ ಮೈಲಿಕಲ್ಲಿಗಾದರೂ ಸುಖವಿತ್ತೇ? ಇದು ನಡೆಯುವ ಹಾದಿ

ಯಲ್ಲವೇ? ಹಿಂದೊಬ್ಬರು ಆಫೀಸರರು ಈ ದಾರಿ ನಡೆಯುತ್ತ ಬಂದ ರಂತೆ. ಅವರು ಇಲ್ಲಿಗೆ ದೂರ ೧೬ ಮೈಲೆಂದೇ ನಂಬಿ ನಡೆದರಂತೆ. ಆದರೆ ಅವರ ಕಾಲೆಂದಿತಂತೆ — ದೂರ ಇನ್ನೂ ಹೆಚ್ಚಿಗೆ ಇರಬೇಕೆಂದು. ಅವರು ಹಟ ಹಿಡಿದು ಇಂಚುಪಟ್ಟಿಯಿಂದ ಪುತ್ತೂರಿಂದ ಇಲ್ಲಿಗಿರುವ ದೂರವನ್ನು ತಿರುಗಿ ಅಳೆಯಿಸಿದರಂತೆ. ಆಗ ರಸ್ತೆಯು ಉದ್ದವಾಯಿತು. ಸೆಕೆಕಾಲದ ಕಾವಿನಿಂದ ಅದು ಉದ್ದವಾಗಿರಬಹುದೆಂದು ತಿಳಿಯದೆ ಹೋದ ಅವರು, ರಸ್ತೆಯೇ ಉದ್ದವಾಗಿದೆಯೆಂದು ತೀರ್ಮಾನಿಸಿದರು. ಮರುದಿನವೇ ಅಂಕೆ ೧೬ನ್ನೇ ಕಿತ್ತು ೧೮ ಮಾಡಿಸಿದರು."

"ಹೋ, ಹಾಗೋ--ನಾನೀಗ ೧೮ ಮೈಲಿ ನಡೆದಿದ್ದೆನಲ್ಲವೆ! ಕಾಲು ಚರ್ಮ ಸವೆದುದರಲ್ಲಿ ಆಶ್ಚರ್ಯವಿಲ್ಲ."

"ಅದರಿಂದೇನಾಯಿತು? ನಿನಗೆ ಲಾಭವಿದೆಯೇ? ಅವರಿಗಾದರೆ ಇದರಿಂದ ಲಾಭವಾಯಿತು."

"ಹೇಗೆ?"

"ಅವರೋ, ಬಲು ವರ್ಷಗಳಿಂದ ಈ ದಾರಿ ನಡೆದವರು. ಪ್ರತಿ ಬಾರಿಯೂ ೧೬ ಮೈಲಿನ ಲೆಕ್ಕದಂತೆಯೇ ಎಣಿಸಿ ಮೈಲಿಗೆ ೩ ಅಣೆ ಯಂತೆ ಭತ್ತೆ ಪಡೆದವರು. ಈ ಹೊಸ ಲೆಕ್ಕದಂತೆ ಅವರು ಎಣಿಸಲಾಗಿ ಅವರಿಗೆ ತಮ್ಮ ಸರ್ವಿಸಿನ ಕಾಲದಲ್ಲಿ ೮೫ ರೂಪಾಯಿ ಆದಾಯ ನಷ್ಟ ವಾಯಿತೆಂದು ಹೇಳಿ,ಅದನ್ನೆಲ್ಲಾ ಸರಕಾರದಿಂದ ಕಕ್ಕಿಸಿಕೊಂಡರಂತೆ!"

"ಬೇಷ್! ಅವರು ತುಂಬ ತಿಳಿವಿನ ಅರ್ಥಶಾಸ್ತ್ರಪಂಡಿತರಿರ ಬೇಕು. ಹ್ಲೋಗಲಿ, ಈಗ ಆ ೧೮ನೆಯ ಮೈಲಿಕಲ್ಲಾದರೂ ಇರಬೇಡವೇ ಇಲ್ಲಿ!" ಎಂದು ಅಡ್ಡಸವಾಲು ಮಾಡಿದೆ ನಾನು.

"ಅತ್ತೆಗೊಂದು ಕಾಲ, ಸೊಸೆಗೊಂದು ಕಾಲ. ಮೊದಲು ಈ

ದಾರಿಯೇ ಅಂದರೆ ಈ ಎಡದಲ್ಲಿರುವ ದಾರಿಯೇ ರಾಜ ಮಾರ್ಗವಾಗಿತ್ತು. ಆದರೆ ಈಗ ಕೆಲವು ವರ್ಷಗಳಿಂದ ಬಲದ ಮಾರ್ಗವನ್ನು ರಾಜ ಮಾರ್ಗ ಮಾಡಿಬಿಟ್ಟರು."

"ರಾಜ ಬದಲಿಸಿದನೇ ಸರಕಾರ ಬದಲಿಸಿತೇ?"

"ಏನೋ ಅರಿಯೆ, ಲೆಕ್ಕ ಬದಲಿಸಿತ್ತು. ಪುತ್ತೂರಿನ ಲೆಕ್ಕ ತಪ್ಪಿಸಿ, ಮತ್ತೊಂದೂರಿನ ಅಂಕೆ ಕೊಟ್ಟರು. ಈಗ ಆ ೧೮ನೆಯ ಮೈಲಿಕಲ್ಲನ್ನು ಮತ್ತೂ ಮುಂದಕ್ಕೆ ಒಯ್ದು ಹಾಕಿದ್ದಾರೆ!"

"ಹಾಗಾದರೆ ನಾನು ನಡೆದು ಬಂದ ರಸ್ತೆಯು ರಾಜ ಮಾರ್ಗವಲ್ಲ; ಕೀಳು ದಾರಿ!"

"ನನ್ನನ್ನು ನೋಡಿದರೆ ತೋರದೇ? ನನ್ನ ಬಲ ಕಪಾಲಕ್ಕೆ ಅಂಟಿದಷ್ಟು ದೂಳು, ಎಡ ಕಪಾಲಕ್ಕೆ ಅಂಟಿಕೊಂಡಿದೆಯೇ? ಬಲಕ್ಕಿರುವ ರಾಜಮಾರ್ಗವಲ್ಲಿನ ಓಡಾಟ ಈ ಕುರು ಮಾರ್ಗಕ್ಕಿಲ್ಲ. ಅದಕ್ಕೆ ದೊರೆತ ರಿಪೇರಿಯೂ ಇದಕ್ಕಿಲ್ಲ!"

"ಏನು, ಇಲ್ಲೇ ನಿಂತಿದ್ದರೆ ನನಗೆ ಮೋಟರು ಸಿಗಬಹುದೇ?"

ನನ್ನ ಮನದಲ್ಲಿ ಮೋಟರಿನ ಹಂಬಲವಾಯಿತು. ಹೋಗಲಿ, ಇಲ್ಲೇ ನಿಂತುದರಿಂದ, ನನ್ನ ಮುಂದುವರಿದ ಗೆಳೆಯರಿಗೂ ಮೊದಲಾಗಿ ನನಗೆ ಮೋಟರು ದೊರೆತರೆ, ಪರರಾಜ್ಯವನ್ನು ನಾನು ಸೇರಿ ಒಂದಿಷ್ಟು ಕಾಫಿ ಕುಡಿದೇನು—ಎಂದು ಅನಿಸಿತು! ಮಾತು ಮುಗಿಯುವುದರಲ್ಲಿ ಯಾವುದೋ ಮೋಟರು ಬಂದಿತು . . . . ನಾನು ಅಲ್ಲಿಂದಲೇ ಕೈಯೆತ್ತಿದೆ! ಮೋಟರಿನವನು ಮುರಿದ ಕೈಕಂಬವನ್ನು ಕಾಣುವಷ್ಟೇ ಗೌರವದಿಂದ ನನ್ನನ್ನು ಕಂಡು ಮೋಟರನ್ನು ಓಡಿಸಿದನು. ಅದರಲ್ಲಿ ಜನರಿಲ್ಲದೆ ಹೋದರೂ, ನಾನು ಮಾಜಿ ಮೈಲಿಕಲ್ಲಿನೊಡನೆ ಉಳಿಯಬೇಕಾಯಿತು.

"ಏನು, ಅವನಿಗೆ ಕಣ್ಣಿಲ್ಲವೇ? ಇಂಥ ಕವಲು ದಾರಿಯಲ್ಲಿ ಜನರು ನಿಂತಿರಬಹುದೆಂಬ ತಿಳಿವಿಲ್ಲವೇ" — ಎಂದೆ.

"ಹಾಗಲ್ಲ, ಇಲ್ಲಿ ದನ ಕಾಯುವ ಹುಡುಗರು ಚೇಷ್ಟೆಗೆ ಆಗಾಗ ಮೋಟರನ್ನು ಕಂಡು ಚಪ್ಪಾಳೆ ಹೊಡೆಯುವರು; ಕೈಯೆತ್ತುವರು. ಇಲ್ಲಿನ ಕಂಬವನ್ನು ಮುರಿದವರೂ ಅವರೇ. ಹೀಗಾಗಿ ಅವನು, ನಿನ್ನ ಎತ್ತಿದ ಕೈಯನ್ನೂ ಅಸಡ್ಡೆಯಿಂದ ನೋಡಿ ಸರಿದುಬಿಟ್ಟನು."

"ನನ್ನನ್ನು ಇಲ್ಲಿ ಸಾಯಬಿಟ್ಟು . . . ."

"ನಿನ್ನ ಸಹಾಯಕ್ಕೆ ನಾನಿಲ್ಲವೇ!" ಎಂದಿತು ಕಲ್ಲು.

"ನಿನ್ನ ಹಣೆಗೆ ನನ್ನ ಹಣೆ ಜಜ್ಜಿಕೊಳ್ಳಲೇ"-ಎಂದು ನಾನು ಕಿರಿಚಿ, ನಿರಾಶನಾಗಿ, ಅದರ ಬುಡದಲ್ಲೇ ಮಲಗಿಬಿಟ್ಟೆ.

ಸಂಜೆಯ ವೇಳೆಗೆ ಯಾರೋ ಬಂದು ನನ್ನನ್ನು ಎಚ್ಚರಿಸಿದರು. ನನ್ನ ಬಾಯಿಗಿಷ್ಟು ನೀರನ್ನು ತಂದು ಸುರಿದರು. ಎಚ್ಚರವಾಯಿತು. ಬಂದವರು ಗೆಳೆಯರು. ಅವರು ಮುಂದುವರಿದು, ನಾನು ಬಾರದೆ ಹೋದುದನ್ನು ಕಂಡು, ಸಂಜೆಯ ಮೋಟರಿನಲ್ಲಿ ಹಿಂದಿರುಗಿ ಬಂದೂ ಆಗಿತ್ತು. 'ಏನು ಸಂಗತಿ' ಯೆಂದು ಕೇಳಿ ತಿಳಿಯುವ ಮೊದಲೇ, ಅವರು ನನ್ನನ್ನು ಮೋಟರಿನಲ್ಲಿ ಎತ್ತಿ ಇರಿಸಿದರು.

ನನಗೆ ತಿರುಗಿ ಎಚ್ಚರ ಬಂದುದು ಊರಿಗೆ ಬಂದ ಮೇಲೆ. ಸಮನಾಗಿ ತಿಳಿವು ಬಂದ ಬಳಿಕ ನನ್ನ ಗೆಳೆಯರನ್ನು ಕೇಳಿದೆನಂತೆ. "ನಿಮಗೆ ಆ ಮೈಲಿಕಲ್ಲು ಎಲ್ಲಾದರೂ ಕಾಣಸಿಕ್ಕಿತೇ" — ಎಂದು.



# ಕೋಳಿ ಕತ್ತಿ

ನಮ್ಮೂರಿನಲ್ಲೇ ಒಬ್ಬ ಬಡಗೌಡ. ನಮ್ಮ ಮನೆಗೆ ತುಂಬ ಸಮಯದಿಂದ ಚಿಲ್ಲರೆ-ಪಲ್ಲರೆ ಕೆಲಸಗಳಿಗೆ ಬರುತ್ತಿದ್ದ. ಕೆಲಸಕ್ಕೆ ಬರಲು ಮರವೆಯಾದರೂ ಎಲ್ಲ ಸಜ್ಜನರಾದ ನೆರೆಕರೆಯವರಂತೆ, ಉಪ್ಪು ಇಷ್ಟು ಕೊಡಿ, ಮೆಣಸು ಕಡಮೆಯಾಗಿದೆ, ಬೆಲ್ಲ ಮುಗಿಯಿತು, ಮದ್ದಿಗೆ ಇಷ್ಟು ಹಾಲು ಬೇಕು" — ಎಂಬುವರ ಸಲುವಾಗಿಯಾದರೂ ಎರಡು ದಿವಸಗಳಿಗೊಮ್ಮೆ ನಮಗೆ ಸಂದರ್ಶನ ಲಾಭವನ್ನು ಕೊಡುತಿದ್ದ. ಒಮ್ಮೆ ಆ ಮಹಾತ್ಮನು ಒಂದು ವಾರದಿಂದ ಮನೆಗೆ ಬಾರದೆ ಇದ್ದುದನ್ನು ಕಂಡು ಆಶ್ಚರ್ಯವಾಯಿತು. ಮಳೆಗಾಲದಲ್ಲಿ ಮನೆಯಂಗಣವನ್ನು ನೇಸರು ಬೆಳಗದೆ ಹೋದರೂ ಲೋಪವಾಗದು, ಅವನ ಪಾದಧೂಳಿ ನಮ್ಮ ಮನೆ ಮೆಟ್ಟಲನ್ನು ಪವಿತ್ರಗೊಳಿಸದೆ ಹೋದರೆ— ವಿಧಿ ಲೋಪ ಬಂದಿತೆಂದೇ ಲೆಕ್ಕ. ಅಯ್ಯೋ ಏನು ಮಾಡಲಿ— ಎಂದು ನಾನು ಯೋಚಿಸುತ್ತ ನಿಂತ ಗಳಿಗೆಯಲ್ಲೇ ಅವನ ಹುಡುಗ ನಾನಿದ್ದಲ್ಲಿಗೆ ಬಂದನು. 'ನೀವು ಒಮ್ಮೆ ನನ್ನಪ್ಪನನ್ನು ಬಂದು ಕಾಣಬೇಕಂತೆ'— ಎಂದು ಹೇಳಿ ಹೋದನು.

ಗೌಡ ನಮ್ಮ ಮನೆಯನ್ನು ಬೆಳಗುವ ಬದಲು ನಾನು ಅವನ ಮನೆಯನ್ನು ಪುನೀತಗೊಳಿಸುವ ಯೋಗಕ್ಕಾಗಿ ನನಗೆ ವಿಸ್ಮಯವಾಯಿತು. "ಸರಿ, ಏನೋ ಹೆಚ್ಚಿನ ಪ್ರಸಂಗವಿರಬೇಕು; ಪ್ರಾಯಶಃ ಗೌಡರಿಗೆ ಕಾಯಿಲೆ" ಎಂದು ಊಹಿಸಿ ಅವನ ಮನೆಗೆ ಹೋದೆ. ಪಾಪ, ಗೌಡ ಕಾಲಿಗೆಲ್ಲಾ ಅರಿವೆ ಸುತ್ತಿಕೊಂಡು ಮಲಗಿದ್ದ; ಮೈತುಂಬ ಜ್ವರವಿತ್ತು. ನಾನು ಬರಲು "ಅಯ್ಯೋ, ನನ್ನ ಮಾನ, ಜೀವ ಎಲ್ಲ ನಿಮ್ಮ

ಕೈಯಲ್ಲಿ"--ಎಂದನು. 'ಏನು ಸಂಗತಿ' ಎಂದೆ. ಅವನು ಉತ್ತರವಾಗಿ ತನ್ನ ಕಾಲಿಗೆ ಸುತ್ತಿದ ಅರಿವೆಯನ್ನು ಬಿಡಿಸಿದನು. ಕಾಲೆಲ್ಲ ಲೇಪಗಳಿಂದ ತುಂಬಿತ್ತು. ನಡುವೆ ದೊಡ್ಡದೊಂದು ಗಾಯ; ಅದಂತು ಕೀವು ತುಂಬಿ ಸಾರುತ್ತಿತ್ತು. ಗೌಡನಿಗೆ ಜ್ವರವೇರಿತ್ತು. ನನಗೆ ಅವನು ಇಷ್ಟರ ಮೇಲೂ ಬದುಕಿರುವುದನ್ನು ಕಂಡೇ ನೆ ಆಶ್ಚರ್ಯವಾಯಿತು. "ಏನಪ್ಪಾ ಇದು? ಇಂಥ ದೊಡ್ಡ ಗಾಯವಾಗಿ, ಸೆಪ್ಟಿಕ್ ಆಗಿದೆ. ಆಸ್ಪತ್ರೆಗಾದರೂ ಹೋಗಬಾರದೇ?" ಎಂದೆ. ಅವನ ಹೆಂಡತಿಯನ್ನು ಕರೆದು ಹೆದರಿಸಿ "ನಿನಗೆ ಇದ್ದೊಬ್ಬ ಗಂಡ ಹೆಚ್ಚಾಗಿದ್ದಾನೆಯೋ"-ಎಂದೆ. "ಆಸ್ಪತ್ರೆ ಬೇಡ" ಎಂದ ಗೌಡ.

"ಅಲ್ಲಿ ಈಗಿರುವ ದಾಕ್ತಾರರು ಮನುಷ್ಯರನ್ನು ತಿನ್ನುವುದಿಲ್ಲ" — ಎಂದೆ ನಾನು.

"ದಮ್ಮಯ್ಯ, ಗಟ್ಟಿಮಾತನಾಡಬೇಡಿ. ಯಾರಾದರೂ ಖಾಸಗಿ ದಾಕ್ತಾರರಿದ್ದರೆ ಮದ್ದು ಕೊಡಿಸಿ."

ಅವನ ಹಟ ನೋಡಿ 'ಆಗಲಿ' ಎಂದೆ; ಆದರೆ "ಇದು ಎಂಥಾ ಗಾಯ? ಕಾಲುದ್ದಕ್ಕೂ ಗಾಯ ಹೇಗಾಯಿತು, ಯಾರು ಹೀಗೆ ಕಡಿದರು?-ಸರಕಾರದವರಲ್ಲಿ ಒಂದು ಫಿರ್ಯಾದಿಯನ್ನಾದರೂ ಮಾಡಬಾರದೆ" — ಎಂದೆ.

ಅವನು ಮತ್ತಷ್ಟು ಕಂಗಾಲಾದುದನ್ನು ನೋಡಿ "ಹೋಗಲಿ, ಗಾಯ ಹೇಗೆ ಆಯಿತೆಂದಾದರೂ ಹೇಳು. ಒಳಗೇನಾದರೂ ಚೂರು ಗೀರು ಉಳಿದಿದ್ದರೆ!" ಎಂದೆ. ಅವನು ತನ್ನ ಹೆಂಡತಿ ಮಕ್ಕಳನ್ನು ದೂರ ಕಳುಹಿಸಿ "ಅಯ್ಯಾ ಮಾನ ಉಳಿಸಿ" ಎಂದು ನನ್ನ ಕೈಯಲ್ಲಿ ತೀರ ಸವೆದ ಮೊನಚು ಕತ್ತಿ ಒಂದನ್ನು ಕೊಟ್ಟನು. ಹಿಂದೊಂದು ಕಾಲದಲ್ಲಿ

ಅದು ಕೋಳಿ ಕತ್ತಿಯಾಗಿದ್ದಿರಬೇಕು ಎಂದು ನನಗೆ ಅನಿಸಿತು.

ಜ್ವರ ಕುದಿಯುತ್ತಿದ್ದ ಗೌಡನನ್ನು ಮಾತನಾಡಿಸಿ, ಅಲ್ಲೇ ಕುಳಿತು ಫಲವಿಲ್ಲವೆಂದು "ಹೂಂ, ಗಾಡಿ ಕಳುಹಿಸುತ್ತೇನೆ. ಅದರಲ್ಲಿ ದಾಕ್ತಾರರ ಮನೆಯ ವರೆಗೆ ಬಾ" – ಎಂದೆ.

"ಯಾವ ದಾಕ್ತಾರರು?"

ನನಗೆ ಸಿಟ್ಟು ಬಂದುಕೂಡದು – "ಯಾವನಾದರೆ ನಿನಗೇನು? ಅವರ ನಂಟುತನ ಮಾಡಬೇಕೇ? ಸುಮ್ಮನೆ ಹೆಣದಹಾಗೆ ನಿನ್ನ ಕಾಲು ಹೊತ್ತುಕೊಂಡು ಬರಬಾರದೆ?" ಎಂದೆ.

ಗೌಡ ಮತ್ತೂ ಹಟ ಹಿಡಿದ–"ಊಹೂಂ. ನಾನು ಇಲ್ಲಿಂದ ಏಳಲಾರೆ. ಸತ್ತರೂ ಇಲ್ಲೇ ಸಾಯುತ್ತೇನೆ" ಎಂದ.

ಅವನ ಹಟದ ಮುಂದೆ ಗಾಂಧಿಜೀಯವರ ಸತ್ಯಾಗ್ರಹ ಸಹ ತೀರ ಸಣ್ಣದು! "ಹೋಗಲಿ. ಮದ್ದನ್ನು ಇವಳ ಕೈಯ್ಯಲ್ಲಿ ಕೊಟ್ಟು ಕಳುಹಿಸುತ್ತೇನೆ" ಎಂದೆ.

"ಯಾರಿಗೆಂದು ತಿಳಿಸಿದರೆ ನನ್ನಾಣೆ" ಎಂದ.

"ನನ್ನ ಕಾಲೇ ಗಾಯವಾಗಿದೆ ಎಂದರೆ ದಾಕ್ತಾರರು ನಂಬಲಾರರಲ್ಲ" ಎಂದೆ.

ಅಂತು ಆ ದಿನ ಗೌಡನ ಹಟವೇ ಗೆದ್ದಿತು. ನಾನಂತು ಮದ್ದನ್ನು ತರಿಸಿಕೊಟ್ಟೆ. ನಿತ್ಯ ಅವನಿಗೆ ತಿಳಿದ ರೀತಿಯಲ್ಲಿ ಗಾಯದ ಸೇವೆ, ನಡೆಯಿತು. 'ನಾಯಿ ಹುಣ್ಣಿಗೆ ಬೂದಿ ಮದ್ದು' ಎಂಬಂತೆ ಗೌಡನ ಗಾಯಕ್ಕೆ ಹಾಗಿಸಿದ್ದೇ ಮದ್ದಾಯಿತು. ಅಂತು ಗೌಡನಿಗೆ ಗುಣವಾಯಿತು. ಆದರೂ ನಡೆದು ಬರಲು ಕಾಲು ಕುಂಟಿಸುತ್ತಿದ್ದುದರಿಂದ "ಹೇಗಿದ್ದಾನೆ ಗೌಡ" ಎಂದು ತಿಳಿಯಲು ನೋಡಹೋದೆ. ಗೌಡ ಎಲೆ ಅಡಿಕೆಯ ತಾಂಬೂಲ

ನನ್ನ ಮುಂದಿರಿಸಿದ. ಅಡಿಕೆ ತರಿಸಿ ಸಿಪ್ಪೆತೆಗೆದು, ಕೆರೆಯಲು ತೊಡಗಿದ. ಯಾವುದರಿಂದೆಂದು ಕೇಳುತ್ತೀರಿ! ಆ ದಿನ 'ಸೆಪ್ಟಿಕ್' ಗಾಯವಾಡಿದ ಅದೇ ಚೂರಿಯಿಂದ.

ನನಗೆ ಅವನ ತಾಂಬೂಲ ತಿನ್ನಲು ಧೈರ್ಯ ಬರಲಿಲ್ಲ. 'ನನ್ನ ವೀಳೆಯ ಮುಗಿದಾಗಿದೆ, ಎಂದೆ. ಬದಲು ಅವನ ಚೂರಿಯ ಮೇಲೆ ನನ್ನ ಕಣ್ಣು ಬಿತ್ತು. ಅದನ್ನು ನಾನು ಆಟಕ್ಕಾಗಿ ಹಿಡಿದುಕೊಂಡೆ. ಕೊನೆಗೆ ತುಂಬ ಪ್ರೇಮ ಬಿದ್ದು, ಅದನ್ನು ಎತ್ತಿಕೊಂಡು ಮನೆಗೂ ತಂದೆ. ಮರು ದಿನ, ನಡೆಯಲಾರದ ಗೌಡನ ಕಾಲು, ಆ ಚೂರಿಯ ಸಲುವಾಗಿ ನಮ್ಮ ಮನೆಯ ತನಕವೂ ನಡೆದುಕೊಂಡು ಬಂದಿತು. ಕಾಲಿನ ಜತೆಗೆ ಗೌಡ ನಂತು ಬಂದಿದ್ದ. "ಅಯ್ಯಾ, ಮರೆತು ನನ್ನ ಅಡಿಕೆ ಹೆರೆಯುವ ಚೂರಿ ತಂದಿರಿ" ಎಂದ. ನಾನು "ಹಾಗೋ,ಹೋಗಲಿ, ಅದೆಲ್ಲಿ ಬಿದ್ದುಹೋಯಿತೋ,ಇಗೋ,ಬದಲಿ ಚೂರಿ ಕೊಡುತ್ತೇನೆ"ಂದು ಹಳೆಯರಾಜೇಶ್ರೀ ಚೂರಿಯೊಂದನ್ನು ಅವನಿಗೆ ಕೊಟ್ಟೆ. ಗೌಡ ತೃಪ್ತನಾಗಿ ಹೋದ.

ರಾತ್ರಿಯಾಗಲು—ಎಂಥಾ ಹುಚ್ಚ ನಾನು; ಕೆಲಸಕ್ಕೆ ಬಾರದ ವೊಂಡ ಕತ್ತಿಯನ್ನು ಕೊಂಡು, ನನ್ನ ರಾಜೇಶ್ರೀ ಚೂರಿಯನ್ನು (Rodgers) ಕಳೆದು ಕೊಂಡೆನಲ್ಲಾ" ಎನಿಸಿತು, ಆದರೂ ಆ ಚೂರಿಯನ್ನು ತಲೆದಿಂಬಿನ ಬಳಿ ಇರಿಸಿಕೊಂಡು ಮಲಗಿದೆ. ರಾತ್ರಿಯೆಲ್ಲ ಆ ಚೂರಿಯದೇ ನೆನಪು ನನಗೆ. ನಡುನಿದ್ರೆಯಿಂದೆದ್ದು 'ಚೂರಿ'-ಎಂದು ದಿಂಬಿನ ಕೆಳಕ್ಕೆ ಕೈಹಾಕಿದೆ. ಕೈಯನ್ನು ಕುಕ್ಕಿತು ಚೂರಿಯ ಮೊನೆ! ಅಯ್ಯೋ ಎಂದು ಕಿರಿಚಿದೆ. ದೀಪ ಹಚ್ಚಿದೆ. ನೆಲದ ಮೇಲೆ ಮಲಗಿದ ಆ ಚೂರಿಯು ಒಮ್ಮೆಗೇ ಥರಥರ ನಡುಗಬೇಕೇ! ಅರೆ! ಚೂರಿ ಮನುಷ್ಯನಿಗೆ ಅಂಜುವುದುಂಟೇ' ಎಂದುಕೊಂಡೆ. ಮತ್ತೆ ನಾನು ದುರದುರನೆ ಅದನ್ನೇ

ಕಂಡೆ. ಅದು ನಕ್ಕಿತು. "ಏ ಪಾಪಿ, ನನ್ನ ಕೈಯನ್ನು ಗಾಯಮಾಡಿ ತಿರುಗಿ ನಗುತ್ತೀಯಾ? ನೀನು ಗೌಡನನ್ನು ಎರಡು ತಿಂಗಳ ಕಾಲ ಮಲಗಿಸಿದಿ. ಹಾಗೆ ನನ್ನನ್ನೂ ಮಲಗಿಸಬೇಕು. ನಿನ್ನ ಹುಟ್ಟು ಅಡಗಿಸುತ್ತೇನೆ ನೋಡು" ಎಂದು ಗದರಿಸಿದ.

ನನ್ನ ಕತೆಯನ್ನು ಕೇಳಿದರೆ, ನನಗೆ ನೀನು ಚಿನ್ನದ ಹಿಡಿ ಹಾಕಿಸುವಿ.

"ಚಿನ್ನದ ಹಿಡಿ! ನಿನ್ನನ್ನು ಆಣಿಯಾಗಿ ಬಡಿಯಿಸಿ, ಯಾವುದಾದರೂ ಮಳೆಯಾಳಿ ಭೂತದ ಕಣ್ಣಿಗೆ ಕೀಲು ಹೊಡೆಯಿಸುತ್ತೇನೆ. ನಿನ್ನಂತಹವನಿಗೆ ಚಿನ್ನದ ಹಿಡಿಯೆ!"

ಒಮ್ಮೆಗೇ ಚೂರಿ ವಿನಯವನ್ನು ತಾಳಿತು. "ನನಗೊಂದು ಕಾಲದಲ್ಲಿ ಚಿನ್ನದ ಹಿಡಿಯೇ ಇತ್ತು. ಈಗ ಹೀಗಿದ್ದೇನೆ ಎಂದೇ? ನನ್ನ ತಲಾಂತರದ ಕತೆಯನ್ನು ಕೇಳಿದಲ್ಲಿ ನಿನಗೆ ನನ್ನ ಮೇಲೆ ಮರುಕ ಬಂದೀತು" ಎಂದಿತು.

"ಏನು ನಿನ್ನ ತಲಾಂತರಗಳ ಕತೆ! ನಿನಗೆ ತಲೆಯೂ ಇಲ್ಲ; ಅಂತರವೂ ಇಲ್ಲ. ಬದಲು ನನ್ನ ರಕ್ತ ಪಾನಮಾಡಲು ಬಂದಿರುವೆಯಷ್ಟೆ."

"ನನ್ನ ಕತೆ ಹೇಳುತ್ತೇನೆ. ನೀನು ನನಗೆ ಹಿಡಿ ಹಾಕಿಸದಿದ್ದರೂ ಚಿಂತೆಯಿಲ್ಲ, ಆದರೆ ನನಗೆ ಮಳೆಯಾಳಿ ಭೂತದ ಸಂಸರ್ಗ ಮಾತ್ರ ಕೊಡಿಸಬೇಡ. ನಿನ್ನನ್ನು ಚುಚ್ಚಿದ್ದು ನನ್ನ ಅಪರಾಧ. ನಿನ್ನನ್ನು ಗಾಯಗೊಳಿಸುವುದು ನನ್ನ ಉದ್ದೇಶವಿರಲಿಲ್ಲ. ಬದಲು ನನ್ನ ಕತೆ ಹೇಳಿದರೆ ನೀನು ಕೇಳಿ ಕನಿಕರ ಪಡುವೆ—ಎಂದು ಹಾಗೆ ಮಾಡಿದೆ."

"ಏನು ಕತೆ? ಹೋಗಲಿ, ಇನ್ನಾವ ಕತೆಯನ್ನು ಹೇಳದೆ ಹೋದರೂ

ಚಿಂತೆಯಿಲ್ಲ. ನೀನು ಆ ಪಾಪದ ಗೌಡನ ಕಾಲನ್ನು ಸಿಗಿದು, ಅವನ ಮೂರು ತಿಂಗಳ ಅನ್ನವನ್ನು ಅಪಹರಿಸಿದೆಯಲ್ಲ—ಅದೇಕೆ ಹೇಳು? ಗೌಡನಂಥ ಬಡವನಿಗೆ ಆ ದುರ್ಗತಿಯನ್ನು ತಂದ ನೀನು ಎಂಥ ಹೀನ!" ಎಂದು ಹಿಯಾಳಿಸಿದೆ.

"ನೀನು ಸತ್ಯ ಹೇಳಿದರೆ ನಂಬುತ್ತಿಯಾ?"

"ಸತ್ಯ ಹೇಳುವವರೇ ಇಲ್ಲದಾಗ, ನಿನ್ನದು ಸತ್ಯವೆಂದು ಹೇಗೆ ತಿಳಿಯಬೇಕು? ಹೋಗಲಿ, ನೀನು ಒದರುವುದನ್ನು ಒದರಿಬಿಡು."

"ನೀನೆಂದಂತೆ ಗೌಡ ಪಾಪದವನಲ್ಲ!"

"ಶ್ರೀಮಂತನೇ?"

"ಶ್ರೀಮಂತನಲ್ಲ. ಶ್ರೀಮಂತರಲ್ಲಿಗೆ ಹೊಕ್ಕು ಹೊರಡುವ ಕಳ್ಳ."

"ಕಳ್ಳನೇ ಅವನು? ಕದಿಯುವಷ್ಟು ಚಮತ್ಕಾರ ಅವನಿಗಿದ್ದರೆ, ಅವನು ತನ್ನ ಮನೆಗೆಇಷ್ಟರಲ್ಲಿ ಹಂಚು ಹಾಕಿಸಬಹುದಿತ್ತು. ಗೌಡ ಆಲಸಿ ಹೌದು; ಕೆಲಸಕ್ಕೆ ಕರೆದರೂ ಬರಲಾರ, ಅಹುದು. ಆದರೆ—ಕಳ್ಳ ನೆಂದೂ ಆಗಿರಲಾರ."

"ಹಗಲೆಲ್ಲ ಅವನು ಹಾಗೇನೆ! ರಾತ್ರಿ ಮಾತ್ರ ಚಟುವಟಿಕೆ ತುಂಬಿ ದವನು. ಆ ಗೌಡನಿಗೆ ನಾನು ರಾತ್ರಿಯಲ್ಲೇ ಭೇಟಿ ಕೊಟ್ಟೆನು."

"ರಾತ್ರಿಯೇ! ಎಲ್ಲಿ—ಏನು—ಎಂಥ ಮಾತು" ಎಂದು ವಿಸ್ಮಯ ಗಳ ಸುರಿಮಳೆಯನ್ನೇ ಸೂಸಿದೆ.

"ನಿಜಕ್ಕೂ ಅವನು ಒಂದು ರಾತ್ರಿ ಡಾಕ್ಟರ್ ಶ್ಯಾಮರಾಯರ ಹಿತ್ತಲಿಗೆ ಹೋಗಿದ್ದ. ಅವರ ಮನೆಯ ತೆಂಗಿನ ತೋಟದ ಮೇಲೆ ಅವನ ಕಣ್ಣು ಬಿದ್ದಿತ್ತು. ಡಾಕ್ಟರಿಗೆ ಇವರಂಥವರು ಹಳೆಯ ಅನುಭವ. ಅದ ಕ್ಕೆಂದೇ ನನ್ನನ್ನು ಒಂದು ಮರಕ್ಕೆ ನಾಟಿಸಿದ್ದರು. ಗೌಡನು ಮರವೇರಿ,

ಸನ್ನಿಂದ ಬಾಧಿತನಾಗಿ ಕೆಳಗೆ ಬಿದ್ದ. ಹಾಗೆ ಬಿದ್ದ ಪುಣ್ಯಾತ್ಮ—ಗಾಯ ದಿಂದ ತಪ್ಪಿ ಬಂದರೆ ಸಾಕೆಂದು ತಿಳಿಯಲಿಲ್ಲ; ಜತೆಗೆ ನನ್ನನ್ನೂ ಹೊತ್ತು ತಂದ."

ಆಗ ನನಗೆ ಗೌಡನ ಗಾಯದ ವಿಚಾರ ಒಂದು ಅರ್ಧ ಪ್ರಪಂಚವೇ ಕಣ್ಣೆದುರು ಹಾಸಿತು. ಆಸ್ಪತ್ರೆಗೂ ಹೋಗದೆ, ಡಾಕ್ಟರರ ಮನೆಗೂ ಹೋಗದೆ, ಗೌಡ ಹಟ ಮಾಡಿದ ಕತೆಯ ನೆನಪಾಗಲು "ಈ ಕತ್ತಿ ಅಂದುದು ನಿಜ" ಎನಿಸಿತು.

"ಹಾಗಾದರೆ ಕತ್ತಿಯೇ, ನೀನು ಡಾಕ್ಟರ ಶ್ಯಾಮರಾಯರಿಗೆ ಹೇಗೆ ದೊರೆತೆ?"

"ಅದೋ, ಇನ್ನೊಂದು ಪುರಾಣ. ನಾನು ಕೋಳಿ ಕತ್ತಿಯಲ್ಲವೇ! ನಿಮ್ಮ ಡಾಕ್ಟರರ ಗಿರಾಕಿಗಳಲ್ಲಿ ಅಚ್ಚಣ್ಣ ಭಂಡಾರಿಗಳು ಹೆಸರಾದವರು!"

"ಯಾರು, ಕೋಳಿ ಅಂಕದಲ್ಲಿ ಬೆರಳು ಕಳೆದುಕೊಂಡವರೇ!"

"ಅವರೇ, ಅದಕ್ಕೂ ನಾನೇ ಕಾರಣ. ನಾನು ಅವರಿಗೆ ಅಂಕಗಳಲ್ಲಿ ನೂರು ಕೋಳಿಗಳನ್ನು ಗೆದ್ದು ಕೊಟ್ಟಿದ್ದೇನೆ. ಕೊನೆಗೆ ನಾನು ಸವಕಲು ಆದೆನೆಂದು ಭಂಡಾರಿಗಳು 'ಇನ್ನು ಈ ಕತ್ತಿ ಪ್ರಯೋಜನವಿಲ್ಲ" ವೆಂದರು. 'ನಾಳೆಗೆ ನನಗೆ ಪೆನ್ಶನು ಪ್ರಾಪ್ತಿ' ಎನ್ನುವಾಗ, ಇಂದಿನ ಕೋಳಿ ಅಂಕದಲ್ಲಿ ಅವರ ಕೈ ಬೆರಳನ್ನು ಹಾರಿಸಿಬಿಟ್ಟೆ. ನನ್ನೆದುರಿನ ಕೋಳಿ ನಾಗಪ್ಪ ಶೆಟ್ಟರದಿತ್ತು. ಅವರ ಕೆಮ್ಮೈರನೊಡನೆ ನಾನು ಭಂಡಾರಿಗಳ ಬಿಳಿ ಕೋಳಿಯ ಕಾಲಿಗೆ ಕಟ್ಟುಬಿದ್ದು ಕಾದಾಡಿದೆ. ನನ್ನನ್ನು ಹಿಡಿದ ಬಿಳಿಯನಿಗೆ ಗಾಯವಾಯಿತು. ಆದರೂ ಭಂಡಾರಿಗಳು ತಡೆಯದಾದರು. ತಮ್ಮ ಕೋಳಿಯ ಹೊಟ್ಟೆ ಸೀಳಿ, ಒಳಕ್ಕೆ ಬಾಳೆಹಣ್ಣು,

ತುರುಕಿ ತಿರುಗಿ ಹೊಲಿದು, ಗಾಳಿ ಹಾಕಿ, ಬೆಂಕಿ ಹಿಡಿದು ನನ್ನನ್ನು ಕಾದಾಡಲು ಬಿಟ್ಟರು. ಕೋಳಿ ನನ್ನೊಂದಿಗೆ ಹಾರಿ ಹಾರಿ, ವೈರಿಯನ್ನು, ಸಾಗಪ್ಪ ಶೆಟ್ಟರ ಕೋಳಿಯನ್ನು ಕೊಂದಿತು. ಕೊನೆಗೆ ಹಾರಿ ಭಂಡಾರಿಗಳ ಮೇಲೆರಗಿ ಪ್ರಾಣಬಿಟ್ಟಿತು. ಅದು ಹಾರಿದ ಹೊಡೆತಕ್ಕೆ, ನಾನು ಭಂಡಾರಿಗಳ ಕಣ್ಣನ್ನು ಕುಕ್ಕದಿದ್ದುದು ವಿಸ್ಮಯ! ಆ ದಿನ ಅವರ ಬೆರಳು ಮಾತ್ರ ಹೋಯಿತು."

"ಹೋ! ನೀನು ನೂರಾರು ಕುಕ್ಕುಟಗಳ ಸಂಹಾರೇಶ್ವರನೇ?"

"ಅಯ್ಯೋ – ಅದೇನು ಮಹಾ ಕೆಲಸ ಸ್ವಾಮಿ? ನನ್ನ ಹಿಂದಿನ ಜನ್ಮದಲ್ಲಿ ಮತ್ತೂ ಹೆಚ್ಚಿನ ಕೆಲಸಗಳನ್ನು ಮಾಡಿದ್ದೆ. ಅನೇಕರಿಗೆ ಕಣ್ಣೀರು ಕುಡಿಸಿದ್ದೆ. ಅನೇಕರಿಗೆ ಸಂತಸ ತಂದಿದ್ದೆ."

"ಇದೇನು ಅವತಾರಗಳಷ್ಟು ನಿನ್ನದು – ?". ಎಂದೆ.

"ಅದೋ! ನಾನು ನಿಮ್ಮ ಊರಿನ ಈಗಿನ ಗೋವಿಂದ ಕ್ಷೌರಿಕನಿಲ್ಲವೇ—ಅವನ ಅಜ್ಜನ ಹೆಸರೂ ಗೋವಿಂದ—ಅವನ ಕೈಯಲ್ಲಿರುವಾಗ ನಡೆದ ಕೆಲಸಗಳವು!"

"ಅದು ಹೇಗಯ್ಯ?"

"ಅದೇ? ಅದೇ ಒಂದು ಪುರಾಣ. ಆ ಗೋವಿಂದನಿಗೆ ನಾನೆಂದರೆ ಒಂದು ದೇವರು. ನನ್ನನ್ನು ಬಾಳಾಗಿ ಅವನು ಹಿಡಿದ ದಿನ – 'ಒಂದೂ ದ್ರವ್ಯ ಲಾಭ, ಇಲ್ಲವಾದರೆ ಕಣ್ಣೀರು ಖಂಡಿತ!"

"ದ್ರವ್ಯಲಾಭ-ಅರ್ಥವಾಗುವ ವಿಷಯ. ಕ್ಷೌರಮಾಡಿಸಿದವರು ಕಾಸೆರಡು ಕಾಸನ್ನಾದರೂ ಕೊಡಬೇಕಲ್ಲ. ಆದರೆ ನಿನ್ನಿಂದ ಕಣ್ಣೀರು ಹೇಗೆ?"

"ಕಾಸೆರಡು ಕಾಸು – ಎಂಥ ದ್ರವ್ಯಲಾಭ? ಪುರೋಹಿತ ನಾರಾ

ಯಣ ಭಟ್ಟರೋ, ಅವನ ಮೇಲು ತೋಟದ ಮಾಲಿಂಗ ಭಟ್ಟರೋ ಇವರೆಲ್ಲ ನಗದಿನ ಕುಳುವಾರುಗಳಲ್ಲ. ವರ್ಷಕ್ಕೆ ಇಂತಿಷ್ಟು -- ಎಂದು ಬತ್ತ ಸಲಿಸುವವರು. ಹಾಗೆ ನಗದು ಕೊಟ್ಟರೆ ಯಾವನಾದರೂ ಮಾಪಿಳ್ಳೆಯೋ, ಕಿರಿಸ್ತಾನನೋ— ಕೊಡಬೇಕು. ಅದೂ ಆಗಿನ ದಿನಗಳಲ್ಲಿ ಇಡೀ ಒಬ್ಬನ ತಲೆಯ ಗುಡ್ಡ ಸವರಿ, ಗಡ್ಡ ಗೀಸಿದರೆ ಒಂದು ಪಾವಾಣೆಗೂ ಮಿಕ್ಕಿ ಕೊಟ್ಟಾರೆಯೇ?"

"ಹಾಗಿದ್ದರೆ ನಿನ್ನಿಂದ ಗೋವಿಂದನಿಗೆ ಬೇರೇನು ಲಾಭವಿತ್ತು?"

ನನ್ನನ್ನು ಹಿಡಿದು ಶಸ್ತ್ರಪಂಡಿತನಾದ ಅವನು ಈಗಿನ ಡಾಕ್ಟರರು ಮಾಡುವ ಓಪರೇಶನ್ನುಗಳನ್ನೆಲ್ಲ ಮಾಡಿದ್ದಾನೆ. ಕುರು, ಬಾವು, ಯಾವುದು ಬಂದರೂ ಚಟ್ಟನೆ ನನ್ನನ್ನು ಅವುಗಳಲ್ಲಿ ಊರಿ, ಪರಿಹಾರ ಮಾಡುತ್ತಿದ್ದ. ಅದರಿಂದ ಅವನಿಗೆ ತುಂಬ ದ್ರವ್ಯಲಾಭವಾಗುತ್ತಿತ್ತು."

"ನಿನಗೂ ಅದು ಸಂತೋಷದ ಕೆಲಸವಾಗಿತ್ತೇ?"

"ಅಯ್ಯೋ, ನನ್ನ ಸಂತೋಷವೇ! ಯಾವುದಾದರೂ ಅರಮನೆಯಲ್ಲಿದ್ದರೆ ಮಾವಿನ ಹಣ್ಣಿಗೆ ಮೃತ್ಯುವಾಗಬಹುದಾಗಿದ್ದ ನಾನು, ಆ 'ರಸ' ಜೀವನವನ್ನು ಬಿಟ್ಟು ಈ 'ರಸಿಕೆ' ಜೀವನ ನಡೆಸಬೇಕಾಯಿತು. ಅದಾದರೂ ಬೇಕು. ಗೋವಿಂದನು ನನ್ನನ್ನು ಇನ್ನೊಂದು ಅನ್ಯಾಯಕ್ಕಾಗಿ ತೊಡಗಿಸುತ್ತಿದ್ದುದು ಮಾತ್ರ ತೀರ ಅಸಹ್ಯವಾಗಿತ್ತು."

"ಅದೇನದು?"

"ಅವನೋ-ಬಲು ನಿಷ್ಕರುಣಿ. ಕರ್ತವ್ಯ, ಕರ್ತವ್ಯವೆಂದು ನೂರಾರು ಸಕೇಶಿಗಳಿಗೆ ನನ್ನಿಂದ ಸನ್ಯಾಸ ಕೊಡಿಸಿದ್ದಾನೆ. ಅಂತಹ ಕೆಲಸ ಬಂತೆಂದರೆ ನಗುತ್ತ—"ಹುಂ, ನಮ್ಮ ನಾರಾಯಣ ಭಟ್ಟರು ಇನ್ನೊಂದು ಶುಭ ಕೆಲಸ ನನ್ನಿಂದ ಮಾಡಿಸುತ್ತಿದ್ದಾರೆ" ಎನ್ನುತ್ತಿದ್ದ.

"ಅವರು ಮಾಡಿಸುತ್ತಿದ್ದಾರೆ! ಎಂದರೆ?"

"ನಮ್ಮೂರಿನ ಶಾಸ್ತ್ರಗಳಿಗೆಲ್ಲಾ ಆ ನಾರಾಯಣ ಭಟ್ಟರು ತವರು ಮನೆ. ಹೀಗಾಗಿ, ಗಂಡನಳಿದನೆಂದರೆ, ಊರ ದುರ್ದೈವಿಗಳು ಅವರ ಶಾಸ್ತ್ರಕ್ಕೆ ಬಲಿಯಾಗಲೇ ಬೇಕು. ಕೊನೆಗೊಂದು ದಿವಸ ಸ್ವತಃ ಅವರ ಮಗಳೇ ನನ್ನ ಬಳಿಗೆ ಬಂದಳು!"

"ನೀನು ಬಲು ನಿಷ್ಕರುಣಿ—"

"ನನ್ನನ್ನೇಕೆ ಬಯ್ಯುತ್ತೀರಿ? ನನಗೆ ಅಬುಬಕರನೂ ಒಂದೇ, ಸಕೇಶಿಯೂ ಒಂದೇ, ಸನ್ಯಾಸಿಯೂ ಒಂದೇ. ಸಕೇಶಿಯರನ್ನು ಮುಂಡನ ಮಾಡುವಾಗ ನನಗೆ ಯಾವ ವ್ಯಥೆಯೋ, ಆ ದಿನ ವೀರಚಂದ್ರಮಠಕ್ಕೆ—ನನ್ನಿಂದ ಪಟ್ಟವನ್ನು ಕೊಡಿಸಿದಾಗಲೂ ಅದೇ ದುಃಖವಾಯಿತು."

"ಅದೇನು ಮಠದ ಪುರಾಣವಯ್ಯ!"

"ಒಮ್ಮೆ ಆ ಮಠಕ್ಕೆ ಬಾಲಸನ್ಯಾಸಿಯನ್ನು ತಯಾರಿಸಬೇಕಾಯಿತು. ಅದಕ್ಕೆ ಬರಿಯ ಎಂಟು ವರ್ಷದ ಮಾಣಿಯೊಂದನ್ನು ತಂದು, ಗೋವಿಂದನ ಮುಂದೆ ನಿಲ್ಲಿಸಿದರು. ಗೋವಿಂದ ಉಳಿದವರನ್ನು ಹೆರೆಯುವಾಗ ಬಂಟನಾಗಿದ್ದರೂ, ಈ ಮುಂಜಿಪ್ರಾಯದ ಹುಡುಗನ ಚೆಲುಗೂದಲನ್ನು ತರಿಯುವಾಗ ಅತ್ತಿದ್ದ!"

"ಇದೇನಯ್ಯ—ಒಂದೇ ರೀತಿಯ ಹೇಸಿ ಕೆಲಸ ನಿನ್ನದು?"

"ಬಾಳ್—ಎಂದರೆ ಹಾಗಲ್ಲವೆ ಸ್ವಾಮಿ?"

ಬಾಳು-ಎಂದರೆ ಕಣ್ಣೀರಿನ ಸ್ನಾನ ಎಂಬುದು ನಿಜ ಎಣಿಸಿತು ನನಗೆ. 'ಬಾಳು' ಎಂಬುದರ ಅರ್ಥ 'ಬಾಳ್' ಇದರಿಂದಲೇ ಬಂದಿತು ಎಂದು ತರ್ಕಿಸಿದೆ. ಅಷ್ಟಕ್ಕೆ, "ಚಿನ್ನದ ಹಿಡಿಯ ವಿಚಾರ—ಏನು" ಎಂದು ಕೇಳಿದೆ.

"ಅದನ್ನು ಕೊನೆಗೆ ಹೇಳುತ್ತೇನೆ. ಮೊದಲು ಬೆಳ್ಳಿಯ ವಿಷಯ ಹೇಳುತ್ತೇನೆ."

"ಅದೇನು?"

"ನಾನು ಮೊದಲು ಮೂಡುಪ್ರಾಂತ್ಯದಲ್ಲಿ ಹಿಂದೆ ಒಂದು ಬೊಬ್ಬರ್ಯನ ಗುಡಿಯಲ್ಲಿದ್ದೆ."

"ಬೊಬ್ಬರ್ಯನ ಗುಡಿಯಲ್ಲಿ ಬಾಳೇಕೆ!"

"ಆಗ ನಾನು ಅಲ್ಲಿನ ಖಡ್ಗವಾಗಿದ್ದೆ. ಆಗ ನನಗೆ ಬೆಳ್ಳಿಯ ಹಿಡಿಯಿತ್ತು."

"ಹಾಗಿದ್ದರೆ ಅಲ್ಲಿಂದ ಕ್ಷೌರಿಕ ಗೋವಿಂದನ ಕೈಗೆ ಹೇಗೆ ಬಂದೆ?"

"ಅದೋ—ಒಂದು ಚಮತ್ಕಾರವಾಯಿತು. ಆ ದೈವದ ಪಾತ್ರಿಯು, ವರ್ಷದ ಪೂಜೆಯ ದಿನ ನನ್ನನ್ನು ಹಿಡಿದು ಕುಣಿಯುವುದು ರೂಢಿಯಿತ್ತು. ಒಂದು ವರ್ಷ, ಅವನಿಗೆ ಮುಂಚಿನ ದಿನದ ಕುಡಿತದ ಅಮಲು ಇಳಿಯದೆ ಹೋಗಿತ್ತು. ಆಗ ದೈವದ ಪೂಜಾರಿಯಾಗಿ ನನ್ನನ್ನು ಹಿಡಿದು ಕುಣಿದನು. ನಾನು ಅವನ ಕೈತಪ್ಪಿ ಕೆಳಕ್ಕೆ ಬಿದ್ದೆ; ಮುರಿದುಹೋದೆ! ಮೊದಲು ಪೂಜಾರಿಗೆ ಗಾಬರಿಯಾಯಿತು. ಹೀಗೇಕಾಯಿತೆಂದೂ ತಿಳಿಯಿತು. ಆದರೆ ನಿಜವನ್ನು ಬಾಯಿಬಿಡಲಾರದೆ—'ಯಾರೋ ನನಗೀಗ ದ್ರೋಹವೆಸಗಿದ್ದಾರೆ. ಈ ನನ್ನ ಖಡ್ಗವು ಮುರಿದಂತೆ ಅವರು ನಾಶವಾಗುತ್ತಾರೆ' ಎಂದನು. ಬಂದವರು ಒಬ್ಬರೊಬ್ಬರ ಮುಖಗಳನ್ನು ನೋಡಿ ಬೆದರಿಹೋದರು. ಕೊನೆಗೆ ನನ್ನೊಂದು ತುಂಡು ಕಮ್ಮಾರನ ಕುಲುಮೆಯನ್ನು ಸೇರಿ ಸಂಸ್ಕಾರ ಹೊಂದಿ ಗೋವಿಂದನ ಶಸ್ತ್ರವಾಯಿತು! ಅವನ ಕೈಯ್ಯ ಬಾಳಾಯಿತು. ನನ್ನ ಈ ಜನ್ಮಕ್ಕೆ ಹಿಂದಿನದು ಚಿನ್ನದ ಬಾಳು; ನನ್ನ ಸ್ವರ್ಣಯುಗ! ಆಗ ನಾನು ಗುಂಡಾಪುರ ಅರಮನೆಯ ಪಟ್ಟದ ಕತ್ತಿಯಾಗಿದ್ದೆ."

"ಪಟ್ಟಕತ್ತಿಯೆಂದ ಮೇಲೆ, ನಿನಗೆ ಚಿನ್ನದಹಿಡಿ ಇದ್ದಿರಲೇಬೇಕು"

ಅಹುದಹುದು. ಆಗ ರತ್ನ, ಮುತ್ತುಗಳಿಂದ ಖಚಿತವಾಗಿಯೂ ಬಿಟ್ಟಿದ್ದೆ ನಾನು. ರತ್ನಖಚಿತವಾದುದರಿಂದಲೋ ಏನೋ, ಬಲು ಮನ್ನಣೆಯಿಂದ ಅರಮನೆಯವರು ನನ್ನನ್ನು ಪೂಜಿಸಿದರು. ಈ ಊರಿನ ಅರಸು, ಸುಮಾರು ನೂರು ಗ್ರಾಮಗಳ ಬಿರುಸಾದ ಅರಸು, ನನ್ನನ್ನು ಪ್ರತಿ ಮಹರ್ನವಮಿಗೆ ಪೂಜಿಸಿ, ಒಮ್ಮೆ ಕೈಯಲ್ಲಿ ಹಿಡಿದುಕೊಂಡು ಸಿಂಹಾಸನವನ್ನೇರುತ್ತಿದ್ದ.

"ಹಾಗಿದ್ದರೆ ನಿನಗೆ ಕೆಲಸವೇ ಇರಲಿಲ್ಲ; ಪೂಜೆ ಮಾತ್ರ. ಒಳ್ಳೆಯ ಜನ್ಮ."

"ಅಂಥ ಒಳ್ಳೆಯ ಜನ್ಮ--ಒಂದೇ ಒಂದು, ನನಗೆ ದೊರಕಿದುದು. ಅದೂ ಬಲು ಸ್ವಲ್ಪ ಕಾಲ. ನಮ್ಮ ನೂರು ಗ್ರಾಮದ ಅರಸನ ಮೇಲೆ ನೆರೆಯೂರಿನ ನಾನ್ನೂರು ನಾಡಿನ ದೊರೆ ಯುದ್ಧಕ್ಕೆ ಬಂದನು. ಪರಾಕ್ರಮಿಯಾದ ನನ್ನ ಅರಸು ನನ್ನೊಡನೆ ಓಡತೊಡಗಿದನು. ಊರು ಬಿಟ್ಟು ಕಾಡನ್ನು ಸೇರಿದನು. ಸರಿ, ಸೋತ ಕುದುರೆಯನ್ನು ನಂಬಲಾರದ ಅವನ ಸೇನಾನಿಗಳು, ಅದೇ ನನ್ನಿಂದ, ಅದೇ ಅವನನ್ನು, ಅದೇ ಅಲ್ಲಿ ಮುಗಿಸಿ-ಬರಿಯ ನನ್ನನ್ನು ಎಸೆದು, ರತ್ನಖಚಿತವಾದ ಹಿಡಿಯನ್ನಷ್ಟೆ ಸಾಗಿಸಿದರು. ಅಲ್ಲಿಂದ ಮುಂದೆ ನಾನು ದೊರಕಿದುದು ಒಬ್ಬ ದೆವ್ವದ ಪಾತ್ರಿಗೆ!"

"ನಿನ್ನದು ವಿಚಿತ್ರ ಜೀವನವಯ್ಯ—"

"ಅಹುದು, ಬಲು ವಿಚಿತ್ರವಾದುದು. ಆದರೆ ಅಂದಿನಿಂದ ಇಂದಿನತನಕ ಒಂದಲ್ಲಒಂದು ರೀತಿಯಿಂದ ರಕ್ತಪಾನ ದೊರೆಯುತ್ತಲೇ ಇತ್ತು!"

"ಹಾಗಿದ್ದರೆ ಪುಣ್ಯಾತ್ಮ--ನಿನ್ನನ್ನು ಮಳೆಯಾಳಿ ದೆವ್ವಕ್ಕೇನೆ ಸಲಿ

ಸಬೇಕು. ನನಗೆ ನಿನ್ನ ತಂಟೆಯೇ ಬೇಡ" ಎಂದು ನಾನೂ ಭೀತಿಯಿಂದ ನುಡಿದೆ.

ಆಗ ಚೂರಿಯು ಅತ್ತುಬಿಟ್ಟಿತು. "ಅಯ್ಯಾ ಮಹಾನುಭಾವ, ಅದೊಂದು ಹೊಸತು ದುರ್ಗತಿಯನ್ನು ಕೊಡಿಸಬೇಡ. ನನ್ನನ್ನು ನಿನ್ನಲ್ಲಿಯೇ ಇರಿಸಿಕೊ. ಬದಲು ನಿನ್ನ ಹಾಸಿಗೆಯನ್ನು ಕಾಡುವ ತಗಣೆಗಳನ್ನೊರೆಯುವುದರಿಂದಲಾದರೂ ನಿನ್ನಸೇವೆಯನ್ನು ಸಲಿಸುವೆ" ಎಂದಿತು.

"ಅಬ್ಬ, ಇದರ ನೆತ್ತರ ಪ್ರೀತಿಯೇ" ಎಂದೆನಿಸಿತು ನನಗೆ.



# ಮಿ। ದುಸ್ತುಬಿನ್

ಮಂಗಳೂರಿನ ಬೀದಿಯೊಂದರಲ್ಲಿ ಒಂದು ದಿವಸ ಬಿರಬಿರನೆ ನಡೆಯುತ್ತಿದ್ದೆ. ಬೆಳಗಿನ ಮುಂಜಾನೆ; ಜನ ಸಂಚಾರವಿದ್ದಿಲ್ಲ. ನಾನು, ಒಬ್ಬನೇ ಆ ಸಮಯ ಎಚ್ಚರವಿದ್ದವನೆಂದು ತಿಳಿಯಬೇಕು. ಏಕಾಗ್ರ ಚಿತ್ತನಾಗಿ, ಯಾವ ವಿಷಯವನ್ನೂ ಯೋಚಿಸದೆ, ಹಾದಿ ಹಿಡಿದು ಸಾಗುತ್ತಿದ್ದ ನನ್ನ ಕಾಲುಗಳು ಒಮ್ಮಿಂದೊಮ್ಮೆಗೇ ತಡೆದು ನಿಂತವು. ನಾನೂ ನಿಂತೆನು. ಅದು ಕೇವಲ ನನ್ನ ಕಾಲುಗಳು ನಿಂತುದರಿಂದ ಎಂದು ತಿಳಿಯಬೇಡಿ. ಮೊದಲು ನಿಂತುದು.... ಮೂಗು. ಏನಾಯಿತೋ ಏನೋ, ಅದು ನಿಂತಿತು. ಯೋಚಿಸುತ್ತೇನೆ-ಬಲು ದುರ್ವಾಸನೆಯೊಂದು ನನ್ನ ಮೂಗನ್ನು ತಡೆದು ಹಿಡಿದಿತ್ತು. ನಿಂತೆ-ನೋಡಿದೆ, ಯಾರೂ ಇದ್ದಿಲ್ಲ. ಬಲು ಸೂಕ್ಷ್ಮವಾಗಿ ಕಣ್ಣನ್ನು ಹರಿಸಲು ಸಮೀಪದಲ್ಲಿ ಮಿ। ದುಸ್ತುಬಿನ್ ಕಾಣಿಸಿದನು. ಮಠದ ಸನ್ಯಾಸಿಯಂತೆ ಶುದ್ಧ ಕಾವಿ ಬಣ್ಣವನ್ನು ತೊಟ್ಟು, ಸಮಾಧಿ ಅವಸ್ಥೆಯಲ್ಲಿ— ಭರತಮಾತೆಯೊಡನೆ ತನ್ಮಯವಾದಂತೆ ಅದು (ಅವನು)' ನಿಂತಿತ್ತು (ನಿಂತಿದ್ದನು.) ನನಗೆ ತಡೆಯಲಾರದಂಥ ಕೋಪ ಬಂದು ಈ ಪ್ರಸ್ತಾಪ ಪ್ರಾರಂಭವಾಯಿತು. ಇದರ ತೀರ್ಮಾನವು ಸ್ವಾಭಾವಿಕವಾಗಿ ವಾಚಕರಿಗೆ ಸೇರಿದೆಯೆಂದೂ, ಆ ಕಸದ ತೊಟ್ಟಿಗೆ ಸೇರಿಲ್ಲವೆಂದೂ ಈ ಮೂಲಕ ನಮೂದಿಸೋಣಾಗಿದೆ.

ನಾನು-ಅಲ್ಲವಯ್ಯ, ಇದೇನು? ದಿನಕ್ಕೊಂದು ಜಾಗವನ್ನು ಹಿಡಿಯುತ್ತೀ? ನಿನಗೆ ಗತಿ ಗೋತ್ರವೇ ಇಲ್ಲವೇ?

ದುಸ್ತುಬಿನ್-ಗತಿಗೋತ್ರ ನನಗೆ! ನನ್ನ ಕಾವಿ ಬಣ್ಣವನ್ನು ನೋಡಿ

ಹೀಗೆ ಕೇಳಿದರೆ! ಸನ್ಯಾಸಿ ಸಮಾನನಾದ ನಾನು ಮೂರು ದಿನಕ್ಕೊಮ್ಮೆ ಯಾದರೂ ತಾವನ್ನು ಬದಲಿಸಬೇಕೆಂದು ಸ್ಮೃತಿವಚನವಿರುವಾಗ— (ಈ ವಚನ ನನ್ನ ಸ್ಮೃತಿಯಲ್ಲಿರಲಿಲ್ಲ.)

ನಾನು—ನೀನೇನು ಅಪಹಾಸ್ಯ ಮಾಡುತ್ತೀಯಾ? ಅಲ್ಲ-ಮಕ್ಕಳ ಕಾಲಿನ ಫುಟ್ ಬಾಲಿನಂತೆ ಗಳಿಗೆಗೊಂದು ಕಡೆ, ನೀನು ಸಂಚಾರಕ್ಕೆ ಹೊರಡುತ್ತೀ. ಸ್ನಾನವಿಲ್ಲ; ಸಂಧ್ಯಾವಂದನೆಯಿಲ್ಲ! ಶೌಚವಿಲ್ಲ—ಸುಧಾರಣೆಯಿಲ್ಲ—

ಅಷ್ಟರಲ್ಲಿ ಪ್ರಾತರ್ವಂದನೆಗೆಂಬಂತೆ ದುಸ್ತುಬಿನನು ಅಲ್ಲಿಯೇ ಉರುಳಿಬಿದ್ದನು. ಅದರೊಳಗಿಂದ ಒಂದು ಮುನಿಸಿಪಲ್ ನಾಯಿಯು ಹೊರಟು ಹೋಯಿತು. ನಾತವು ಮತ್ತಷ್ಟು ಕೆದರಿತು.

ದುಸ್ತುಬಿನ್ — ನೋಡಿ, ನಿಮ್ಮ ಬಾಯಿಂದ ಸಂಧ್ಯಾವಂದನೆಯ ವಿಚಾರ ಹೇಳುತ್ತಿರುವಾಗ, ನಾನು ಪ್ರಾತರ್ವಂದನೆ ಮಾಡುವಂಥ ಸ್ಥಿತಿ ಪ್ರಾಪ್ತಿಸಿತು.

ಈ ಮಾತನ್ನು ಆಡುವಾಗ ಅವನು ಕಣ್ಣೀರನ್ನು ಸುರಿಸಿದನು. ಟಪ್ಪೆಂಬ ಸದ್ದಾಗಿ, ಅವನ ಹೊಟ್ಟೆಯ ತಗಡು ಬಿರಿದು, ನಾಲ್ಕು ದಿಕ್ಕುಗಳಿಗೆ (ಅಷ್ಟವಿದ್ದಲ್ಲಿ ಅಷ್ಟು ದಿಕ್ಕುಗಳಿಗೂ) ಒಳಗಿನ ಕರುಳು ಮಾಂಸವೆಲ್ಲಾ ಚೆದರಿದಂತೆ ಚೆದರಿತು.

ಈ ಸಮಯದಲ್ಲಿ ಭಗವಾನ್ ಭಾಸ್ಕರನು ಉದಯಿಸಿದನು. ಮಧ್ಯ ಬೀದಿಯಲ್ಲಿ ಎದೆಯೊಡೆದುಬಿದ್ದ ದುಸ್ತುಬಿನ್! ಸುತ್ತು ಚೆದರಿದ ಅವನ ಪಾರ್ಥಿವ ಶರೀರದ ಭಗ್ನಾವಶೇಷಗಳು! ಜನರೂ ಸೇರಿದರು. ಅತ್ತಿತ್ತ ಸರಿಯುವವರು, ಮೂಗು ಹಿಡಿದು ಆ ಕರುಣಾಮಯ ದೃಶ್ಯವನ್ನು ನೋಡಲಾರದೆ ಸಾಗಿದರು. ಒಬ್ಬರೂ ಅದನ್ನು ಎತ್ತಲಿಲ್ಲ.

ಸಾಲದುದಕ್ಕೆ ಸರಕಾರಿ ರಸ್ತೆಯಲ್ಲಿ ಬೂಟು ಪೇಂಟು ಹಾಕಿದವರು ಜಾರಿಬಿದ್ದರೆ ಅವರನ್ನು ನೋಡಿ ನಗುವಂತೆ ನಕ್ಕು, ಹೊರಟುಹೋದವರು. ಅದರಿಂದ ನನ್ನ ಎದೆಯು ಕರಗಿತು. (ಈಗ ನನ್ನ ಬಳಿಯಲ್ಲಿರುವುದು ಬೇರೊಂದು ಗಟ್ಟಿಯಾದ ಎದೆ. ಕರಗಿಹೋದ ಎದೆಯಿಂದ ಈ ಲೇಖ ಬರೆಯಲಃಸಾಧ್ಯವಿಲ್ಲವಷ್ಟೆ.)

ನಾನು ನಿಂತು ನೋಡಿದೆ. ಮಾತನ್ನು (ವಿನಯದಿಂದ — ಅಲ್ಲ, ಕರುಣೆಯಿಂದ) ಮುಂದುವರಿಸಿದೆ —

ನಾನು — ಅಪ್ಪಾ, ನಿನ್ನನ್ನು ಸಾಯುವ ಗಳಿಗೆಯಲ್ಲಿ ಹೀಗೆ ಅಪ ಹಾಸ್ಯ ಮಾಡಿದನೆಂದು ಕೋಪಿಸಬೇಡ. ಇತರರಷ್ಟು ನೀಚನು ನಾನಲ್ಲ.

ಅವನು — (ಮೌನ)

ನನ್ನ ಮಾತುಗಳಿಂದ ಅವನು ಬಲು ನೊಂದಿರುವನೆಂದು ತೋರಿತು. ಆಗ ನಾನು ಅವನಿಗೆ ಧೈರ್ಯಹುಟ್ಟಲೆಂದು, ಕಾಗದ ಪೇನುಗಳನ್ನು ಹಿಡಿದು 'ಅಣ್ಣಾ ಕೋಪಿಸಬೇಡ. ಕೋಪವು ಮಹಾಪಾಪವು. ನಿನಗಿರುವ ಈ ಕೊನೆಯ ನಾಲ್ಕೋ, ಎಂಟೋ (ಮುಂದೆ ಅದು ಹತ್ತು ತಿಂಗಳ ತನಕವೂ ಮುಂದುವರಿಯಿತು. ಕಾರಣ ಅದರ ಹೆಣವನ್ನು ಮುನಿಸಿಪಾಲಿಟಿಯವರು ಸಾಗಿಸಲೇ ಇಲ್ಲ.) ಗಳಿಗೆಯೊಳಗೆ ನಿನ್ನ ಆತ್ಮ ಕತೆಯನ್ನು ಹೇಳು. ಅಲ್ಲ — ಮೃತ್ಯುವಾಕ್ಯಗಳನ್ನು ಉಸುರು. ಜಗತ್ತಿಗೆ ಅದನ್ನು ಪ್ರಚುರಪಡಿಸುವೆ' ಎಂದೆ.

ಆಗ ಅವನು ತುಸು ಶಾಂತಿಯನ್ನು ಪಡೆದುಕೊಂಡು, ಬಲು ದೀನನಾಗಿ ಮಾತನಾಡಿದನು. 'ಈ ತನಕ ಇಷ್ಟು ವಿನಯದಿಂದ — ವಿನಯದಿಂದೇನು ಕೋಪದಿಂದಲೂ ಸಹ, ನನ್ನನ್ನು ಮಾತನಾಡಿಸಿದವರಿಲ್ಲ. ನೀನೇ ಈ ದಿನ ಮಾತನಾಡಿಸುತ್ತೀಯಾ? ಮನುಷ್ಯರಲ್ಲಿ ಪ್ರಥಮನು

ನೀನು' ಎಂದು ಅಂದನು. ನನಗೂ ಅಂಥ ಗೌರವವು ದೊರಕಿದುದು ಪ್ರಥಮ ಬಾರಿಗೆ.

ನಾನು — ಅಣ್ಣಾ, ನಿನಗೆ ಏನು ಹೇಳಬೇಕೆಂದು ಚೆನ್ನಾಗಿ ತೋರಲಾರದು. ನಾನು ಯುಕ್ತವಾದ ಪ್ರಶ್ನೆ ಕೇಳಿದರೆ ಉತ್ತರ ಹೇಳುವೆಯಾ?

ಅವನು—ಅಯುಕ್ತವಾದುದನ್ನು ತುಂಬಿಸಲು ನನ್ನನ್ನು ಸೃಷ್ಟಿಸಿ........(ಎಂದು ಕಣ್ಣೀರು ಮಿಡಿದನು)........ಆಗಲಿ.

ನಾನು — ನಿನ್ನನ್ನು ಈ ನಾಲ್ಕು ವರ್ಷಗಳಿಂದ ನೋಡುತ್ತಿದ್ದೇನೆ.

ಅವನು — ನಾನು ಹುಟ್ಟಿ ಇಂದಿಗೆ ೧೬ ವರ್ಷಗಳಾದುವು. ಈ ಬೀದಿಗೆ ಬಂದೇ ಏಳೂವರೆ ವರ್ಷಗಳಾದುವು.

ನಾನು—ಅದೇ, ಬಲುದೀರ್ಘ ಸಮಯದಿಂದ ನೋಡುತ್ತಿದ್ದೇನೆ. ಆದರೆ ದಿನಕ್ಕೆ ಒಂದೊಂದು ಕಡೆ ನೀನು ಕಾಣಿಸಲು ಕಾರಣವೇನು? ನಿನಗೆ ಕಾಲುಗಳಿಲ್ಲ, ಆದರೂ ಬಹಳ ಸಂಚರಿಸುತ್ತೀಯಾ...ಕೋಪಿಸಬೇಡ.

ಅವನು — ಅದು ನನ್ನ ತಪ್ಪಲ್ಲ. ನಾನು ಬಂದವನು ರಾಯರ ಮನೆಯ ಗೇಟಿನ ಎದುರಿಗೆ ಸ್ಥಾಪಿತನಾದೆ. ಆದರೆ ಬಹಳ ದಿವಸವಾದರೂ ನನ್ನನ್ನು ಮಾತನಾಡಿಸಿದವರಿಲ್ಲ. ಶಾಲೆಯ ಹುಡುಗರೆಲ್ಲ ಕಲ್ಲೆಸೆದು ನನ್ನ ಬೆನ್ನು ಕೀಲನ್ನು ಮುರಿಯತೊಡಗಿದರು. ರಾಯರ ಮನೆಯವರು ನನ್ನ ಸುತ್ತಲು ಕಶ್ಮಲ ಸುರಿಯುತ್ತಿದ್ದರು. ಅದನ್ನು ಕಂಡು ಯಾರೋ ನನ್ನನ್ನು ಎರಡನೆಯ ರಾಯರ ಮನೆಯ ಎದುರು ಇರಿಸಿದರು. ಒಂದು ದಿನ ಮುಂಜಾನೆ ಒಬ್ಬ ಹೆಂಗಸು ಬಂದು, ಒಂದು ಕೋಲಿನಿಂದ ನನ್ನನ್ನು ತಳ್ಳಿ ಉರುಳಿಸಿ, ನೆರಮನೆಯ ಎದುರು ಕೆಡಹಿದಳು. ಅಲ್ಲಿ ಸ್ಥಾಪಿತನಾದೆ. ಆ ಮನೆಯವರು ಮೂಗು ಮುಚ್ಚಿಕೊಂಡು

ಇನ್ನೊಂದು ಮನೆಗೆ ನನ್ನನ್ನುರುಳಿಸಿದರು. ಆದರೆ ನನ್ನ ತಪ್ಪು ಅದರಲ್ಲಿ ಇಲ್ಲ. ನಾನು ನಾರುತ್ತೇನೆಂದು ಅವರು ಹೇಳಿದರೂ ಅವರ ಹಿತ್ತಿಲ ಬಾಗಿಲುಗಳು ನಾರಿದಷ್ಟು ಹೆಚ್ಚಾಗಿ ನಾನು ನಾರುತ್ತಿರಲಿಲ್ಲ.

ನಾನು—ನಿನ್ನ ಆರೋಪ ಈ ಮನೆಯವರ ಮೇಲೆಯೇ ಏನು?

ಅವನು—ಆರೋಪವೇನು! ನಾನು ಮುನಿಸಿಪಲ್ ತೋಟಿಗಳ ಅನಾದರಕ್ಕೆ ಪಾತ್ರನಾದೆ. ಹಾದಿಯಲ್ಲಿ ಬಿದ್ದಿರುವ ಕಸ ಕಡ್ಡಿಗಳನ್ನು ಒಯ್ದರೂ, ಬಲು ದಿನ ನನ್ನ ಬಳಿ ಬಂದವರಿಲ್ಲ . . . . ಏಕೆ ಬಲ್ಲಿರಾ? ಅವರಿಗೆ ನನ್ನನ್ನು ಮುಟ್ಟಲು ನಾಚಿಕೆಯಂತೆ. ಈ ಪಕ್ಕದ ಮನೆಯ ಮಡದಿಯರು ನನ್ನನ್ನು ಮನೆಯ ಹಿಂದಿನ ಮನೆಯಾಗಿ ತಿಳಿದರು. ಇನ್ನೇನು ಮಾನವುಳಿಯಿತು ನನಗೆ?

ನಾನು—ನಿನ್ನನ್ನು ಯಾರೂ ಮಾತನಾಡಿಸಲಿಲ್ಲವೆ?

ಅವನು-ಹಾಗೆಂದರೆ ಅನ್ಯಾಯ. ಈಗ ನನ್ನ ಗರ್ಭ ಸೀಳಿಹೋದ ನಾಯಿಯನ್ನು ಕಂಡೆಯಲ್ಲ—ಆ ಮರಿಯೊಂದು ಅನವರತವೂ ನನ್ನ ಆಶ್ರಯದಲ್ಲಿ ಬೆಳೆದುದು. ಹೆಚ್ಚೇನು—ರಾಯರ ಮನೆಯಲ್ಲಿ ಒಂದು ನಾಯಿಮರಿಹಾಕಿತು. ಅವರಿಗೆ ಮರಿಗಳನ್ನು ಕೊಲ್ಲಲು ಕೈ ಬರಲಿಲ್ಲ. ಅದರಿಂದ ಒಂದು, ಹೆಣ್ಣು ಮರಿಯನ್ನು ನನಗೆ ಒಪ್ಪಿಸಿದರು. ಅಲ್ಲಿಂದ ಅದರ ಸಂಸಾರವನ್ನು ಸಾಕಿದವನೇ ನಾನು!

ನಾನು—ಅಷ್ಟು ಮಾಡಿದ ನಿನಗೇ ಅದು ಇಂದು ಮೃತ್ಯುವಾಯಿತೆ?

ಅವನು—ಅದರ ತಪ್ಪೇನು, ಪಾಪ, ನನಗೆ ಸಾಯುವ ಗಳಿಗೆ ಬಂದಿದೆ. ಇಂದು ಅತಿ ವ್ಯಥೆಯಿಂದ ನನ್ನ ಹೊಟ್ಟೆ ಬಿರಿದಿದೆ.

ನಾನು—ಅಂಥ ಮಹಾವ್ಯಥೆಯಿಂದ ಈ ಮಹಾಮರಣವಾಯಿತೇ?

ಅವನು — ಅಹುದು ಮಹಾ! — ಅಲ್ಲಿ ನೋಡಿ . . .

ಅಷ್ಟರಲ್ಲಿ, ಹಿಂದೆ ಹೊರಟುಹೋದ ಸದರಿ ಹೆಣ್ಣುನಾಯಿಯು ಅಲ್ಲಿಗೇನೆ ಬಂದು, ಅಲ್ಲಿ ಬಿದ್ದ ರೊಚ್ಚೆಯನ್ನು ಕೆದರಿ ಏನನ್ನೋ ತಿನ್ನ ತೊಡಗಿತು.

ನಾನು — ಅಯ್ಯೋ ಪಾಪ ನಾಯಿಯೇ!

ಅವನು—ಅದನ್ನು ಬಯ್ಯಬೇಡ. ಅದಕ್ಕೆಲ್ಲಿಯ ಪಾಪ! ಅದು ಪಾಪವನ್ನೂ ಹರಿಸುತ್ತಿದೆ.

ನನಗೆ ಈ ಮಾತು ತಿಳಿಯದೆ ಹೋಯಿತು. ಮೂಕನಂತೆ ಆ ನಾಯಿಯನ್ನು ನೋಡಿದೆ. ಆ ನಾಯಿಯು ಏನನ್ನೋ ಅಲ್ಲಿಂದ ಎತ್ತಿ ಕೊಂಡು ಓಡಿತು. ನನಗೆ ಆತುರವಾಗಿ ನಾನು ಅದನ್ನು ಹಿಂಬಾಲಿಸಿದೆ. ಅದರ ಠಾಣೆಯನ್ನು ನೋಡಿದೆ. ಇನ್ನೊಂದು ದುಸ್ತುಬಿನನ ಬಳಿಗೆ ಹೋಗಿ ಅದು ತನ್ನ ಬಿಡಾರ ನಿಶ್ಚಯ ಮಾಡಿಕೊಂಡಿತ್ತು. ಅಲ್ಲಿಗೇನೆ ಈ ವಸ್ತುವನ್ನು ಹೊತ್ತುಕೊಂಡು ಹೋದುದು. ಹೋಗಿ ನೋಡಿದರೆ — ಒಂದು ಕೈ! ಅದಕ್ಕೆ ಐದು ಬೆರಳು! ನಾಯಿಯ ಕೈಯಲ್ಲ! ಗಾಬರಿ ಗೊಂಡು ನಾನು ಬಂದೆ; ತಿರುಗಿ ಹಳೆಯ ದುಸ್ತುಬಿನನಲ್ಲಿಗೇನೆ ಬಂದೆ.

ನಾನು — ಇದರ ಗೂಢವೇನು?

ಅವನು—ಅಷ್ಟು ಮೂರ್ಖನೆ ನೀನು? (ನಾನು ನೊಂದೆ.) ಇದು ನನ್ನ ಇತಿಹಾಸದಲ್ಲಿ ನಾಲ್ಕನೆ ಬಾರಿ ಆದುದು.

ನಾನು — ಇದು ಎಂದರೆ?

ಅವನು—ಅದನ್ನು ನೋಡಿಲ್ಲವೇ? ಕೈಯನ್ನು.... ಈ ಬೀದಿಯಲ್ಲಿ ಇನ್ನೊಂದು ರಾಯರ ಮನೆಯಿದೆ. ಅಲ್ಲಿನ ದಾಸಿ ನಿತ್ಯವೂ ನನ್ನನ್ನು ಉಪಚರಿಸುತ್ತಿದ್ದಳು. ನಿನ್ನೆ ರಾತ್ರಿ, ಕಸತರುವ ಬದಲು ಇದನ್ನು ತಂದು

ದಬಕ್ಕನೆ ಸುರಿದಳು! ಮಳೆ ಬರುತ್ತಿತ್ತು. ಆ ಮಗು ಕೂಗಿತು! ತುಸು ಹೊತ್ತು . . . . ಅನಂತರ ಈ ಓಡಿಹೋದ ನಾಯಿಯು ಅದನ್ನು ತನ್ನ ಹೊಟ್ಟೆಯಲ್ಲಿ ಇರಿಸಿಕೊಂಡಿತು. ನನ್ನ ನಿತ್ಯ ಕೆಲಸದ ಜತೆಯಲ್ಲಿ ಈ ಮೆಟರ್ನಿಟಿ ಆಸ್ಪತ್ರೆಯ ಕೆಲಸವನ್ನೂ ಮಾಡುತ್ತಿದ್ದೇನೆ.

ನನಗೆ ಅದರಿಂದ ಬಹಳ ಮರುಕವಾಯಿತು. ಮೌನವಾಗಿ ನಿಂತಿದ್ದೆ. ಮಾತನಾಡುವ ಸಾಹಸವಾಗಲಿಲ್ಲ. ಅಷ್ಟರಲ್ಲಿ ಆ ನಾಯಿಯು ತಿರುಗಿ ಬಂದಿತು. ಕೊಚ್ಚೆಯನ್ನು ಕೆದರಿ, ಅಲ್ಲಿಂದೊಂದು ತೀರ ಹೊಸ ಬೂಟನ್ನು(ಬೂಟ್ಸಲ್ಲ-ಏಕವಚನದ ಬೂಟು) ಒಯ್ದಿತು. ನನ್ನ ಆಶ್ಚರ್ಯ ಹೆಚ್ಚಿತು. ಅಷ್ಟು ಚಿಕ್ಕ ಮಗುವಿನ ಕಾಲಿಗೆ, ಇಂಥ ದೊಡ್ಡ, ಹೊಸತಾದ ಬೂಟು ಹೇಗೆ ಬಂದಿತೆಂದು. ದುಸ್ತುಬಿನನಿಗೆ ನನ್ನ ಮನಸ್ಸಿನಲ್ಲಿ ಸಂಚರಿಸುತ್ತಿದ್ದ ಪ್ರಶ್ನೆ ತಿಳಿಯಿತೇನೋ.

ಅವನು — ಅದನ್ನೇನು ನೋಡುವೆ! ಇಲ್ಲಿಯ ತನಕ ಜೀರ್ಣವಾದ ಪಾಪಾಸುಗಳೆಲ್ಲಾ ನನಗೇ ಬರುತ್ತಿದ್ದುವು. ನಾಲ್ಕು ದಿನಗಳ ಕೆಳಗೆ ಒಂದು ಜತೆ ಹೊಸ ಬೂಟ್ಸು ಬಂದಿತು!

ನಾನು — ಬಂದಿತು!

ಅವನು--ಬಂದಿತು ಎಂದರೆ ಬರಬೇಕಾಗಿ ಬಂದಿತು. ಪೋಡೂರಿನವನಂತೆ—ಒಬ್ಬ ಹಳ್ಳಿಯ ಹುಡುಗ ಬಂದಿದ್ದ. ಮೈದಾನಿಗೆ ಹೋಗಿ ಒಂದು ಹೊಸ ಬೂಟ್ಸನ್ನೇ ಖರೀದಿ ಮಾಡಿದನಂತೆ. ಇಲ್ಲಿಗೆ ಅವನ್ನು ಮೆಟ್ಟಿಕೊಂಡು ಬರುವಾಗ ಒಂದೆರಡು ತಾಸು ಸಹ ಆಗಿರಲಿಲ್ಲ. ಅದನ್ನು ಹಾಕಿಕೊಂಡು — ಅಲ್ಲ ಎಳೆದುಕೊಂಡು ಬಂದನು! ಕಳಚಿದನು. ಕಾಲು ತುಂಬ ಬೊಕ್ಕೆಯಾಗಿತ್ತು. ನಿಂತುಕೊಂಡಿರುವಾಗ ಇನ್ನೊಬ್ಬ ಹುಡುಗ ಅಲ್ಲಿಗೆ ಬಂದು 'ವರ್ತಮಾನ ಪತ್ರ ಬೇಕೆ?'

ಎಂದು ಅವನನ್ನು ಕೇಳಿದ. ಯಾವ ಪತ್ರ ಏನು ಎಂದು ವಿಚಾರಿಸದೆ ಈ ಹುಡುಗನು ಒಂದನ್ನು ಕೊಂಡುಕೊಂಡ. ಅವನ ರೀತಿ ನೋಡಿದರೆ ನನಗೆ ತಿಳಿದಷ್ಟು ಓದುಬರಹವೂ ಅವನಿಗೆ ತಿಳಿದಿರಲಿಲ್ಲವೆಂಬುದು ಖಂಡಿತ.

ನಾನು — ಹಾಗಾದರೆ ಅದನ್ನೇಕೆ ತೆಗೆದುಕೊಂಡನು?

ಅವನು — ಏಕೆಂದರೆ! ತನ್ನ ಬೂಟ್ಸಿನ ಗೌರವ ಕಾಪಾಡಲು. ಅದೇ ಸಂಜೆ ಆತ ತಿರುಗಿ ನನ್ನ ಮಾರ್ಗವಾಗಿ ಬಂದನು! ಅದನ್ನು ಬಿಡಿಸಿ, ಕಾಲಿಗೆ ಇರಿಸಿಕೊಳ್ಳುವ ಎಂಬ ಗಳಿಗೆಯಲ್ಲಿ ಯಾರೋ — ಎದುರಾದುದನ್ನು ಕಂಡು, ಕಳ್ಳರಂತೆ ಅಂಜಿದನು. ಒಮ್ಮೆಗೇ ಏನು ತೋಚಿತೋ ಏನೋ, ಅವೆರಡನ್ನು ಕಳಚಿ ನನ್ನ ವಶಕ್ಕೆ ಒಪ್ಪಿಸಿ ಮುಂದುವರಿದನು. ತಿರುಗಿ ಆ ಹುಡುಗ ನನ್ನಲ್ಲಿಗೆ ಬರಲಿಲ್ಲ. ಅವನ ರೀತಿ ನೋಡಿ ನನಗೇ ಬೆರಗಾಯಿತು.

ನಾನು — ನನಗೂ ಬೆರಗಾಗುತ್ತದೆ.

ನಿಜಕ್ಕೂ ನನ್ನ ಆತುರವು ಹೆಚ್ಚಿ ಮತ್ತು ಚೆದರಿದ ಕೊಚ್ಚೆಯನ್ನು ಪರಿಶೀಲಿಸಿದೆ. ಅದರ ಮಹಜರನ್ನು ಸಹ ಮಾಡಬೇಕಾಯಿತು. ಸಾರ್ವಜನಿಕ ಪರಾಂಬರಿಕೆಯ ಬಗ್ಗೆ ಅವುಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿರುತ್ತದೆ.

ಒಡೆದ ಬಳೆ ಚೂರುಗಳು........ನಾನ್ನೂರು ಕಾಗದ ಚೂರುಗಳು. (ಅವನ್ನು ಓದಿ ನೋಡಲಾಗಿ— ಅವುಗಳಲ್ಲಿ ಕೆಲವು ಗೋವಾ ಸೋಡ್ತಿ ಚೀಟಿಗಳು. ಇವು ಬಹಳವಾಗಿ ಚಿತ್ರಹಿಂಸೆಗೆ ಗುರಿಯಾಗಿದ್ದಂತೆ ಕಂಡಿತು.) ಒಂದೆರಡು ಕಾಗದದ ಚೂರುಗಳು ದಾಕ್ತಾರರ ಮದ್ದಿನ ಪಟ್ಟಿಗಳಾಗಿದ್ದುವು. ಒಂದು ಒಡೆಯದೆ, ಸಶರೀರೆಯಾಗಿದ್ದ ವಿಸ್ಕಿ ಸೀಸೆ.

ಒಂದು ಮಿತಸಂತತಿಯ ವಿಷಯವಾದ ಪ್ರಸಿದ್ಧ ಗ್ರಂಥ — ಇದಕ್ಕೆ ವಯಸ್ಸಾಗಿದ್ದಂತೆಯೂ ಕೆಲವೊಂದು ನಡುವಣ ಹಾಳೆಗಳು ಹರಿದು, ಉಳಿದುವು ಇದ್ದಂತೆಯೂ ಕಂಡಿತು. ಒಂದೆರಡು ವಿಶ್ವವಿದ್ಯಾಲಯ ಪರೀಕ್ಷಾ ಪತ್ರಗಳೂ ಇದ್ದುವು. ಕ್ಷೌರಾವಶೇಷಗಳು ಉಳಿದ ನಾಲುಗಳಲ್ಲಿ ಮುಕ್ಕಾಲು ಮೂರು ವೀಸವಾಗಿತ್ತು.

ನನ್ನ ಕಣ್ಣೆದುರಿಗೇನೆ ಮುನಿಸಿಪಲ್ ಲಾರಿಯೊಂದು ಬಂದು ಆ ದುಸ್ತುಬಿನನ ನಷ್ಟಕಾಯವನ್ನು ಬಿಟ್ಟು, ಉಳಿದ ಸಾಕ್ಷಿ ಕಂಬಗಳೆನ್ನೆಲ್ಲಾ ಕಿತ್ತು ಒಯ್ದುದ್ದರಿಂದ, ಆ ಮೃತ್ಯುಪತ್ರವನ್ನು ಉಪಾಯವಿಲ್ಲದೆ ನಿಲ್ಲಿಸಬೇಕಾಯಿತು. ನಾನು ಹೊರಡುವ ಗಳಿಗೆಗೆ ಅವನಾಗಿ ನನ್ನನ್ನು ಕರೆದನು.

ನಾನು — ಏಕೆ?

ಅವನು — ಇಷ್ಟೆಲ್ಲ ಬರೆದುಕೊಂಡ ಮೇಲೆ ನನ್ನನ್ನು ಮರೆತು ಬಿಡುವೆಯಾ?

ನಾನು — ಇಲ್ಲ. ಅದರೆ ಏನು ಮಾಡಬೇಕು?

ಅವನು-ಹಿಂದಿನ ಕಾಲದಲ್ಲಿ ಕವಿಗಳು ನನ್ನಂಥ ಬೀದಿ ಕಾಪಿನಾಳ್ವರ ಸಲುವಾಗಿ ಚರ್ಮ ಶ್ಲೋಕಗಳನ್ನು ಬರೆಯುತ್ತಿದ್ದರು. ನೀನು ಯಾರನ್ನಾದರೂ ಹಿಡಿದು ನನ್ನ ವಿಷಯವಾಗಿಯೂ ಅಂತಹ —

ನಾನು — ಚರ್ಮ ಶ್ಲೋಕವನ್ನು!

ಅವನು — ಆಗಲಾರದೇ?

ನಾನು — ನನಗೆ ಕವನ ಪರಿಚಯವಿಲ್ಲ; ಉಳಿದವರಿಂದ ಮಾಡಿಸಲು ನನಗೆ ಧೈರ್ಯ ಸಾಲದು!

ಅವನು — ಅಯ್ಯೋ ನನಗೆ ಯೋಗ್ಯತೆಯಿಲ್ಲ. ಅರ್ಥವಿಲ್ಲದವರಿಗೆಲ್ಲ ಸನ್ಮಾನ ದೊರೆತಿದೆ. ಜನ್ಮದಲ್ಲಿ ಒಂದು ಗಳಿಗೆ ಸ್ವಾರ್ಥ ಮರೆಯದ

ವರೂ ದಿವಾನ ಬಹದ್ದೂರರಾಗಿದ್ದಾರೆ. ಏನಿಲ್ಲ, ಒಂದು ಸಾಮಾನ್ಯ ಕವನವಾದರೂ ಸಾಕು.

ನಾನು – ಪ್ರಾಸವಿಲ್ಲದಿದ್ದರೂ ಚಿಂತೆಯಿಲ್ಲವೇ?

ಅವನು – ಪ್ರಾಸಬೇಡ! ನನ್ನ ಹೆಸರಿಗೆ ಸರಿ ಪ್ರಾಸ ಬರುವ ಶಬ್ದಗಳನ್ನು ಹೆಣೆದು ಕವಿತೆ ರಚಿಸಲು ಪ್ರಾಸವನ್ನಾಯಬಲ್ಲ ವರಕವಿಗಳು ಈಗೆಲ್ಲಿ?

ನನಗೆ ಬಲು ಅಪಮಾನವಾಯಿತು. ಇಂದಿನ ಯುಗಧರ್ಮಕ್ಕೆ ಸರಿಯಾಗಿ ಮೌನವಾಂತು ಹೊರಟುಹೋದೆ. ಅಂದಿನಿಂದ ಬಹಳ ಸಮಯದ ನಂತರ ಆ ದುಸ್ತುಬಿನನನ್ನು ಕುರಿತು ಒಂದಾದರೂ ಸರಳರಗಳೆ ಬರೆಯಬೇಕೆಂಬ ನನ್ನ ಹವಣಿಕೆ ಇನ್ನೂ ಫಲಿಸಿಲ್ಲ.



# ಕಡವಿನ ದೋಣಿ

'ದೋಣಿ' ಎಲ್ಲರಿಗೂ ಅರ್ಥವಾಗುವ ಮಾತು. ಆದರೆ 'ಕಡ'ವು ದಕ್ಷಿಣ ಕನ್ನಡಿಗರ ಸ್ವಾರ್ಜಿತ ಶಬ್ದ. ಉತ್ತರ ಕನ್ನಡದವರ 'ತಾರೀಬಾಗಿಲು' ನಮ್ಮ 'ಕಡ'ವು. ಅದೂ ಕನ್ನಡದ ಬಹುಮುಖ ಮಾತಿನಲ್ಲಿ 'ಕಡವೇ', 'ಕಳು'ವು. ಆದರೆ ಕಳವು ಎಂದೊಡನೆ ಅಪಾರ್ಥವಾಗಬಹುದು. ನಾವೆಲ್ಲಾದರೂ ದೋಣಿಯವನನ್ನು 'ಇದು ಕಳವಿನ ದೋಣಿಯೋ' ಎಂದು ಕೇಳಿದರೆ, 'ಅಲ್ಲ'ವೆಂದಾನು. ಅಂದರೂ ಅವನ ಮಾತು ನಮಗೆ ಅರ್ಥವಾಗಿಲ್ಲ, ನಮ್ಮ ಮಾತು ಅವನಿಗೆ ಅರ್ಥವಾಗಿಲ್ಲ—ಎಂಬುದು ನಿಜ.

ಬರಿಯ ನದಿಯೊಂದನ್ನು ಪಾರಾಗಿಸಬಲ್ಲ ದೋಣಿಯನ್ನು ಕಳವಿನ ದೋಣಿ ಎನ್ನುವುದು ಯಾವ ನ್ಯಾಯ? ಹೀಗೆ ತರ್ಕಿಸಿದರೆ ಭಾಷಾಪಂಡಿತರು ಬಂದು, ಇದರಲ್ಲಿ ಕುಳಿತರೆ ನದಿಯು 'ಕಳೆ'ಯುತ್ತದೆ, ಎಂದು ಸಮಾಧಾನ ಹೇಳುವರು. ಬರಿಯ ಶಬ್ದಕ್ಕೆ ಈಸೊಂದು ಪುರಾಣವಿದ್ದರೆ ನಾನು ಮಾತನಾಡಿದ ದೋಣಿಗೆ ಕಡಮೆಯ ಇತಿಹಾಸ ಇರಲಾರದು.

ಹಿಂದೊಂದು ಸಮಯ ನಾನು ಕುಂದಾಪುರದಲ್ಲಿ ಬಹಳ ದಿನ ಕಾಲ ವಾಸವಾಗಿದ್ದೆ. ಒಂದು ರಾತ್ರಿ ಅಲ್ಲಿನ ನದಿಯ ಕಡವಿಗೆ ಬಂದೆ. "ಓ ದೋಣಿಯವನೇ" ಎಂದೆ! ಅವನದು ಯಾವ ಹೆಸರೋ ಏನೋ-ಅಂತು ಅರ್ಧ ತಾಸಿನ ಬಳಿಕ ಯಾವನೋ ಒಬ್ಬ ದೋಣಿಕಾರನ ಅವತಾರವಾಯಿತು. ಆತ ಬರುವಾಗ ಒಂದಿಷ್ಟು ಹುಲ್ಲು, ಒಂದು ಹರಕು ಚಾಪೆಯನ್ನು ತಂದು, ಒಂದು ಹಳೆಯ, ಬ್ರಹ್ಮಾಂಡ ದೊಡ್ಡ ದೋಣಿ

ಯಲ್ಲಿ ಅವನ್ನು ಹಾಸಿ,—"ನೀವು ಇಲ್ಲಿ ತಣ್ಣಗೆ ಮಲಗಿಕೊಂಡು ಬಿಡಿ" ಎಂದು ಹೇಳಿ ತನ್ನ ಮನೆಗೆ ಹೊರಟನು. "ಏನು? ಮನೆಗೆ ಹೋಗಿ ಬರುತ್ತೀಯಾ?" — ಎಂದು ಕೇಳಿದೆ.

"ಈಗಲೇ ನಾನು ಬಂದೇನು ಮಾಡುವುದು? ನಡುಇರುಳಿಗೆ ಬರುತ್ತೇನೆ; ಇವತ್ತು ಅಷ್ಟಮಿಯಲ್ಲವೆ! ಈಗ ಕರೆ 'ಇಳಿತ'. ಬರತ ಸುರುವಾಗುತ್ತಲೂ ದೋಣಿ ಬಿಟ್ಟರೆ ಬೆಳ್ಳಿ ಮೂಡುವುದರಲ್ಲಿ 'ಸೌಡ' ಸೇರಬಹುದು" — ಎಂದನು. 'ಸೌಡ' ಎಂಬುದು ನಾನು ಹೋಗಬೇಕಾದ ಊರಿನ ಹೆಸರು.

ನಾವಿಕನ ಭಾಷೆ ನನಗಾಗ ಅರ್ಥವಾಯಿತು. ಇಳಿನೀರಿಗೆ ಎದುರಾಗಿ ದೋಣಿ ನಡೆಯಿಸುವುದು ಕಷ್ಟ. ಹಾಗಾಗಿ ಬರತದ ನೀರು ಬರಲು ಅವನು ಕಾಯಬೇಕು. ಅಲ್ಲಿಯ ತನಕ ನಾನು........? ಉತ್ತರ ಸ್ಪಷ್ಟವಾಯಿತು. ಅವನು ಹಾಸಿದ ಹುಲ್ಲು ಹಾಸಿಗೆಯ ಮೇಲೆ, ಆ ಈಚಲ ಚಾಪೆಯಲ್ಲಿ ಮಲಗಿರುವುದು. ಮೇಲಿನಿಂದ ಹಿಮ ಉದುರದೆ, ಕೆಳಗಿನಿಂದ ಈಚಲ ಚಾಪೆಯ 'ಚುಂಗು'ಗಳು ಚುಚ್ಚದೆ ಹೋದಲ್ಲಿ, ಸುಖನಿದ್ರೆ ಮಾಡುವುದು. ಹೋಗಿ ಮಲಗಿ ಕೊಂಡೆ. ಆ ಚಾಪೆಯು ಭೀಷ್ಮನ ಶರತಲ್ಪವಾಯಿತು. ಮಲಗಿದರೂ ನಿದ್ರೆಬರಲಿಲ್ಲಿ. ಕುಳಿತೆ; ಬಾಯಾರತೊಡಗಿತು. ಮರುಳನಂತೆ ನೀರಿಗೆ ಕೈಯಿಕ್ಕಿ ನದಿನೀರನ್ನು ಬಾಯಿಗೆರೆದುಕೊಂಡೆ. ಬೇಸಗೆಯ ಕಡು ಉಪ್ಪುನೀರು! 'ಥೂ' ಇವನ ಮನೆ ಹಾಳಾಗ' ಎಂದು ದೋಣಿಯವನನ್ನು ಶಪಿಸಿ ಮಲಗಿಕೊಂಡೆ.

ನನ್ನ ಕಣ್ಣು ಬಾಡುವಾಗ, ಬಾನಿನ ಕಣ್ಣು ತೆರೆದಿತ್ತು! ತಿರುಗಿ 'ಓ ದೋಣಿಯವನೇ' ಎಂದು ಶಂಖ ಬಾರಿಸಿದೆ. ನನ್ನ ಗಂಟಲು ಬತ್ತಿದ ಮೇಲೆ, ಆವಳಿಕೆಯ ಮೇಲೆ ಆವಳಿಕೆ ತರುತ್ತ, ಅವನೂ ಉದಯಿಸಿದ.

"ಇನ್ನು ಹೊರಡುವ" ಎಂದು, ಜಲ್ಲೆಯಿಂದ ದೋಣಿಯನ್ನು ನಡೆಯಿಸ ತೊಡಗಿದನು. ಬೆಳದಿಂಗಳಿನ ಕವನವು, ನದಿಯ ಗೀತದಲ್ಲಿ ಬೆರೆತು 'ಗಮಕ'ವಾಗಿಬಿಟ್ಟಿತ್ತು! ನಿದ್ರೆಯ ಅಮಲಿನಲ್ಲೇ ನಾನು ಇದೆಲ್ಲವನ್ನು ಗಂಧರ್ವಲೋಕವನ್ನಾಗಿ ತಿಳಿದೆ. ದೋಣಿಕಾರನೇ ಇಂದ್ರನಾದನು; ಜಿಲ್ಲೆಯೇ ಅವನ ವಜ್ರವಾಯಿತು. ನದಿ ದಂಡೆಯ ತೆಂಗಿನ ಮರಗಳೆಲ್ಲವೂ ಗಂಧರ್ವ ಕನ್ನೆಯರಾದರು

ಈ ಸುಖದಲ್ಲಿ ಸಾಗಿದ ಪಯಣ ನಿಂತದ್ದೂ ನನಗೆ ತಿಳಿಯಲಿಲ್ಲ. ಕಣ್ಣು ಹಿಚುಕಿಕೊಂಡು, ಮೂಡಣದಲ್ಲಿ ಮೂಡಿದ ಬೆಳ್ಳಿಯನ್ನು ಕಾಣುವಾಗ— ನನ್ನ ದೋಣಿಯು ಯಾವೂದೋ ಊರಿನ ದಂಡೆಯ ಬಳಿ ನಿಂತಿತ್ತು. ನನಗೆ ಆಗ ಸಮನಾದ ಎಚ್ಚರವಾಯಿತು. ದೋಣಿಗೇನೆ ನಿದ್ರೆ ಬಂದಿತ್ತು. ದೋಣಿಯ ಇಂದ್ರನು ಮಾತ್ರ ಕಾಣಿಸದೆ ಗಾಬರಿಯಾಯಿತು. 'ಅರೇ—ಬೆಳ್ಳಿ ಮೂಡಿತು. ಸೌಡ (ನನ್ನ ಗುರಿ) ಬಂದಿರಬೇಕು. ಆತ ಅಲ್ಲಾರದೋ ಮನೆಯನ್ನು ಸೇರಿ ನಿದ್ರಿಸುತ್ತಿರಬೇಕು. ನಾನು ಬಡಪಾಯಿ, ಮಂಜಿನಿಂದ ತೊಯ್ದು, ಚಳಿಗೆ ಹಲ್ಲು ಕಡಿಯುತ್ತಿದ್ದೇನೆ, ನದಿಯನೀರು ದೋಣಿಗೆ ಬಡಿದು ನಕ್ಕಿತು; ಪ್ರತ್ಯಕ್ಷ ದೋಣಿಯೇ ನಕ್ಕಂತಾಯಿತು.

"ಬೆಳ್ಳಿ ಮೂಡಿದುದರಿಂದ ಸೌಡ ಬಂದಿರಬೇಕು" ಎಂದು ಕೊಂಡೆ.

"ಎಲ್ಲಿನ ಸೌಡ! ಅಲ್ಲಿಗೆ ಇನ್ನು ಏಳೇ ಮೈಲು" — ಎಂದು ಉತ್ತರ ಬಂದಿತು. ದೋಣಿಯವನು ಅಲ್ಲೆಲ್ಲೊ ನಿಂತು ಮಾತನಾಡಿದನೆಂದು ನಾನು ಯೋಚಿಸಿದರೆ ಮಾತನಾಡಿದುದು ನನ್ನ ವಾಹಕ ದೋಣಿ! ನಡು ನೀರಲ್ಲಿ ದೋಣಿಯು ನನ್ನನ್ನು ಗದರಿಸಿದುದಕ್ಕಾಗಿ ಮತ್ತಷ್ಟು ಗಾಬರಿಯಾಯಿತು.

ನನ್ನ ಮೈಮೇಲಿನ ಸ್ಮೃತಿಯು ಪೂರ್ಣವಾಗಿ ಚೇತರಿಸಿತು. ನನ್ನ ಹೊದೆದ ಬಟ್ಟೆಯನ್ನು ಹಿಂಡಿಕೊಂಡೆ. ಆದರೂ ಉಟ್ಟ ಅರಿವೆ ತುಸು ಒದ್ದೆಯಾಗಿತ್ತು. ಇದರ ಕಾರಣವೇನೆಂದು ಪರಿಶೀಲಿಸಿದಲ್ಲಿ-ದೋಣಿಯ ಪ್ರಾಚೀನ ಜರ್ಜರಿತ ಶರೀರದೊಳಗಿಂದ, ನದಿಯ ಬರತದ ನೀರು ಉಕ್ಕಿ ಬಂದು ನನ್ನ ತೃಣತಲ್ಪವನ್ನು ಒದ್ದೆಮಾಡಿತ್ತು. ಈ ಎಲ್ಲ ತೊಂದರೆಗಳು ಸಾಲದೆಂದು, ಹೊರಡುವ ಕಾಲದಲ್ಲಿ ಗಂಧರ್ವಲೋಕದಲ್ಲಿದ್ದ ನಾನು, ವಿಪಿನದಲ್ಲಿ ತ್ಯಜಿಸಲ್ಪಟ್ಟ ಸೀತೆಯಂತಾದುದು ಬೇರೆ. ನನ್ನ ದೋಣಿಕಾರನು ಕಾಣೆಯಾದುದಕ್ಕೆ ಶಪಿಸಿದೆ. "ಅಯ್ಯೋ ಪಾಪಿಯೆ, ಗೋವೆಯ ತನಕ ಕಡಲಲ್ಲಿ ಹೋದ ಮಹಾನೌಕೆಯೆಂದು ನಂಬಿಸಿ, ಈ ಹರುಕು ದೋಣಿಯಲ್ಲಿ ನನ್ನನ್ನು ತುಂಬಿಸಿತಂದು ನಡುನೀರಲ್ಲಿ ಕೈಬಿಟ್ಟೆಯಾ?" ಎಂದು ಅಲ್ಲಿಲ್ಲದ ದೋಣಿಯ ತಂಡೇಲನನ್ನು ಕುರಿತು ಆರ್ಭಟಿಸಿದೆ.!

"ಏನು, ನಾನು ಕಡಲಲ್ಲಿ ಯಾನ ಮಾಡಿದ್ದು ಸುಳ್ಳೇ!" ಎಂದಿತು ದೋಣಿಯ ವಾಣಿ.

"ಇಷ್ಟು ಹರುಕಾದ ನೀನು ಅರಬ್ಬಿ ಸಮುದ್ರದಲ್ಲಿ ಹೋಗಬೇಕಾದರೆ ಯಾರೋ ಪ್ರಾಣದ ಆಸೆಯಿಲ್ಲದವರು ನಿನ್ನನ್ನು ಏರಿರಬೇಕು. ಆತ್ಮಹತ್ಯೆಗೆ ಬೇರೆ ಅನುಕೂಲಮಾರ್ಗವಿಲ್ಲದೆ ನಿನ್ನನ್ನು ನಂಬಿ ಹೊರಟಿರಬೇಕು" – ಎಂದೆ. ಅಂದಂತೆ ನನಗೆ ಕಾಲಕ್ರಮೇಣ ನನ್ನ ದೋಣಿಯು ನೀರು ಕುಡಿದು ನನಗೂ ಇದೇ ಜಲಸಮಾಧಿಯಾದೀತೆ ಎಂಬ ಭೀತಿ ಮೊಳೆಯಿತು.

"ಹೋಗಲಿ, ನಿನ್ನ ಆ ಮಹಾಸಾಗರ ಯಾನದ ಕತೆ ಹೇಳು" ಎಂದೆ.

"ನಾನೇ? ಹುಟ್ಟಿದ್ದೇ ಗೋವೆಯಲ್ಲಿ. ನನ್ನ ತಾರುಣ್ಯ ಕಳೆದುದೂ

ಅಲ್ಲೆ. ಈ ತಂಡೇಲನ, ಎಂಟು ಹತ್ತು ತಲೆಮಾರಿನ ಹಿಂದಿನ ಕೆಂಚ ಕಾರ್ವಿಯು ಮದುವೆಯ ಹೆಂಡತಿಯಂತೆ ಬಾಳಿಕೊಂಡಿದ್ದೆ."

"ಓಹೋ — !"

"ಆದರೆ ನಮ್ಮ ಗೋವೆಯವರಿಗೇ ದುರ್ಗತಿ ಬಂದಿತು. ಅಲ್ಲಿನ ಪೋರ್ತುಗೀಸ ಪಾದ್ರಿಗಳು ಹಿಂದೂ ಜನರನ್ನು ಬಲಾತ್ಕರಿಸಲು ಹೊರಟರು. ಸ್ವಧರ್ಮರಕ್ಷಣೆಗಾಗಿ ನಮ್ಮ ತಂಡೇಲ, ಕುಟುಂಬ ಸಹಿತ ಕಡಲಿಗೆ ನನ್ನನ್ನು ನೂಕಿದನು. ಮೂರು ದಿನ ಬಿರುಗಾಳಿ, ಮಳೆಗಳೆನ್ನದೆ ಕಡಲಲ್ಲಿ ಹಾದು, ನಾನು ಅವನನ್ನು ಕುಂದಾಪುರಕ್ಕೆ ಕರೆದುತಂದೆ."

"ಹೋ — ಕಾರ್ವಿಜನರ (ದೋಣಿಕಾರರ ಜಾತಿ) ಸ್ಥಳ ಪುರಾಣ ಹೀಗೋ! ಗೌಡಸಾರಸ್ವತರು ನೆಲಮಾರ್ಗವಾಗಿ ಇಲ್ಲಿಗೆ ಸಾಗಿಬಂದರೆ ನೀನು ಜಲಯಾನಮಾಡಿ ಬಂದೆಯೋ?"

"ಅಹುದು-ಆದ್ದರಿಂದಲೇ ನನ್ನಪ್ರಾಯವನ್ನು ನೋಡಿ, ಆ ತಂಡೇಲನ ವಂಶದವರು ನನ್ನನ್ನು ಅಭಿಮಾನದಿಂದ ಕಾಯ್ದು, ಒಡಲಿಗೆಲ್ಲಾ ಪತ್ತೆ ಅಂಟಿಸಿ ಇಂದಿಗೂ ಸಲಹಿ ಬಂದಿದ್ದಾರೆ! ಇಲ್ಲಿಗೆ ಬಂದ ಎಷ್ಟೋ ವರ್ಷಕಾಲ — ನಾನು ನಿತ್ಯವೂ ಮೀನು ಹಿಡಿಯಲು ಕಡಲಿಗೆ ಹೋಗುತ್ತಿದ್ದೆ. ಅವರ ಕುಲದವರಿಗೆ ಅದೃಷ್ಟ ಲಕ್ಷ್ಮಿಯಾಗಿದ್ದೆ."

"ಹೊಂ — ನೀನು ಲಕ್ಷ್ಮಿಯೇನೋ ಅಹುದು!"

"ನಿಮಗೇನು ತಿಳಿದೀತು? ನೀವು ಬ್ರಾಹ್ಮಣರು! ಸೌತೆ, ಹಾಗಲಕಾಯಿಗಳಲ್ಲಿಯೇ ಸ್ವರ್ಗವನ್ನು ಕಾಣುವವರು. ನನ್ನ ಬಲೆಗೆ ದಿನಕ್ಕೆ ನೂರುರೂಪಾಯಿಗಳ ಮೀನಿನ ಕೊಳ್ಳೆ ಸಿಕ್ಕಿದ್ದುಂಟು. ಒಮ್ಮೆ ಒಂದು ಥೈಲಿ ನಾಣ್ಯವೂ ಸಿಕ್ಕಿತ್ತು. ಅರಸರು ಅದನ್ನು ಎಂಕುಗೇ ಕೊಟ್ಟರು!"

"ಹಾಗಿದ್ದರೆ ಈ ನಮ್ಮ ತಂಡೇಲನ ಹೆಸರೇನು?"

"ಗೋಯಿಂದ."

"ಅವನಲ್ಲಿ ತುಂಬ ಹಣವಿರಬೇಕು."

"ಅದು ಮಾತ್ರ ಸುಳ್ಳು. ಅವನು ದುಡಿದುದನ್ನೆಲ್ಲ ಹೆಂಡದಲ್ಲಿ ತೇಲಿಸಿ ಬಿಡುತ್ತಾನೆ."

"ಅದರ ಸತ್ಯವನ್ನು ನಿನ್ನ ಹವೆಯೇ ಸಾರುತ್ತದೆ" ಎಂದೆ ನಾನು.

"ಇರಲಿ—ಈ ನಿನ್ನಂಥ ಹರುಕು ದೋಣಿಯನ್ನು ಇನ್ನೂ ಗೋಯಿಂದ ಸವಾರಿಗೆ ಒಯ್ಯುತ್ತಾನೇಕೆ?"

"ಮೊದಲು ನಾನು ಗಂಗೊಳ್ಳಿಯ ಕಡವಿನ ದೋಣಿಯಾಗಿರಲಿಲ್ಲವೆ? ಎಂಥ ಅಮವಾಸೆಯ ನೀರಿರಲಿ, ನೆರೆಯು ಉಕ್ಕಿರಲಿ—ಈ ಗೋಯಿಂದನೇ ನನ್ನನ್ನು ಗಂಗೊಳ್ಳಿಗೆ ನಡುರಾತ್ರಿಯಲ್ಲಿ ಸಾಗಿಸಿದ್ದುಂಟು. ಆ ಅಳುವೆ ಬಾಗಿಲಲ್ಲಿ, ಗಾಳಿ ಅಮರಿಸಿ, ಕಡಲಿನ ತೆರೆಗಳು ಬಡಿಯುವಾಗ ಸಣ್ಣ ಪುಟ್ಟ ದೋಣಿ ಉಳಿದೀತೆ!"

"ಇಷ್ಟೊಂದು ತೂತುಗಳಿದ್ದರೂ ನೀನು ಅಂಥ ನದಿಯನ್ನುದಾಟಿಸುತ್ತಿದ್ದೆ?"

"ಮನುಷ್ಯನಿಗೆ ಒಂಬತ್ತು ತೂತು! ನನಗೆ ತೊಂಬತ್ತು. ಅದರಿಂದ ಅವನೂ ಕೆಟ್ಟಿಲ್ಲ; ಇದರಿಂದ ನಾನೂ ಕೆಟ್ಟಿಲ್ಲ. ಇಬ್ಬರು ಜನರಿದ್ದರಾಯಿತು, ಒಬ್ಬನು ದೋಣಿಯನ್ನು ಒತ್ತಲು; ಇನ್ನೊಬ್ಬ ಒಳಕ್ಕೆ ಬಂದ ನೀರನ್ನು ಎತ್ತಿ ಹಾಕಲು."

"ಯಾರಿಗಾದರೂ ಜೀವ ಭಾರವಾಗಿರಬೇಕು."

"ಯಾಕೆ ಜೀವ ಭಾರವಾಗಬೇಕು? ಯಾರೋ ಶಂತನುವಂತೆ, ದೋಣಿಯಲ್ಲಿ ಮದುವೆಯಾಗಲಿಲ್ಲವೇ? ಈ ದೋಣಿಯಲ್ಲೇ ಕುಳಿತು ಮೀನು ಹಿಡಿಯಲು ಹೋಗುವ ಎಷ್ಟು ಜನ ಅಂಬಿಗರ ಮಕ್ಕಳು ಮದುವೆಯಾಗಿ ಸಂಸಾರಮಾಡಿಲ್ಲ! ಒಂದೇ ಒಂದು ನೆನಪು ಅಳಿದರೆ—"

"ಅದೇನು ನೆನಪು? ದುಷ್ಯಂತ ಮಹಾರಾಯನು ನಿನ್ನಲ್ಲಿ ಕುಳಿತು ಶಕುಂತಲೆಯೊಡನೆ ಸಲ್ಲಾಪಿಸಿದ್ದೇ?"

"ಅದು ಚೇಷ್ಟೆಯ ಸಂಗತಿಯಲ್ಲ. ನೋಡಿ; ಒಂದು ವರ್ಷ ಮಳೆಗಾಲ ಒದಗಿತು. ಕಾರು ತಿಂಗಳ ದಿನ; ಕತ್ತಲಾಗಿತ್ತು. ನದಿಯಲ್ಲಿ ತುಂಬಿದ ನೀರು. ಒಂದು ಮದುವೆಯ ದಿಬ್ಬಣ ಕುಂದಾಪುರದಿಂದ ಬೈಂದೂರಿಗೆ ಹೋಗುವುದಿತ್ತು. ಅವರಿಗಾಗಿ ಗಾಡಿಗಳು ಆಚೆಯ ದಡದಲ್ಲಿ ಕಾದಿದ್ದವು. ಲಗ್ನಮುಹೂರ್ತಕ್ಕೆ ಸರಿಯಾಗಿ ಮುಟ್ಟಬೇಕೆಂದು ಅವರು ನನ್ನನ್ನೇರಿದರು. ಈ ಗೋಯಿಂದಣ್ಣನ ಅಣ್ಣ —'ಮರುಳ' ನು ದೋಣಿ ನಡೆಸುತ್ತಿದ್ದನು. ನಾನು ನಡುಹೊಳೆಯನ್ನು ಸೇರಿದ್ದೆನಷ್ಟೆ. ರೊಂಯ ರೊಂಯ ಎಂದು ಗಾಳಿ ಬೀಸಿತು. ತೆಂಕಿನಿಂದ ಮುಗಿಲು, ಮಳೆ ಅಬ್ಬರಿಸಿತು. ಹೊಳೆಯೋ ಕಡಲಾಯಿತು. ಮತಾಯಿಯ ಮೇಲೆ ಮತಾಯಿ ಎದ್ದು ನೀರೆಲ್ಲ ನನ್ನ ಬಾಣಿಗಳ ಮೇಲೆ ಮುರಿಯಿತು. ಯಾವ ಕಡೆಗೆ ಹೋಗುವುದಕ್ಕೂ ದಿಕ್ಕು ಕಾಣಿಸಲೇ ಇಲ್ಲ. ಆಗ ಮರುಳನು ಒಳಗೆ ಕುಳಿತ ಹೆಂಗಸರು ಮಕ್ಕಳು, ಮುದುಕರನ್ನು ಕುರಿತು, 'ದೇವರೇ ಕಾಪಾಡು, ಎಂದು ಹೇಳಿ ಗಟ್ಟಿಕೂತಿರಿ. ನಾನು ಜಲ್ಲೆ ಊರಿ ಲಂಗರು ಬಿಟ್ಟು ದೋಣಿ ನಿಲ್ಲಿಸುತ್ತೇನೆ. ಎಷ್ಟು ಮತಾಯಿ ಬಂದರೂ ದೋಣಿ ಮುಳುಗದು'—ಎಂದು ಧೈರ್ಯ ಹೇಳಿದನು. ಯಾರು ಕೂಗಿದರೂ ಯಾರು ಏನು ಅಂದರೂ,ಆ ಗಾಳಿಮಳೆಯ ಅರ್ಭಟೆಗೆ ಬೇರೆಯ ಸದ್ದೇ ಕೇಳಿಸಲಿಲ್ಲ. ಒಂದು ಸಾರಿ ಮಿಂಚು ಸಿಡಿಲು ಬಡಿದಾಗ ಮಾತ್ರ ಹೆದರಿದ ಜನರ ಮುಖಗಳು ಭೂತಗಳ ಮುಖಗಳ ಹಾಗೆ ಕಾಣಿಸಿತು.

"ಅರೆ ಗಳಿಗೆಯಲ್ಲಿ ಮಳೆಯ ಆರ್ಭಟೆ ಸಿಡಿಲು,ಎಲ್ಲವೂ ನಿಂತಿತು. 'ಅಯ್ಯಬ್ಬ' ಎಂದರು ಎಲ್ಲರು. ಮರುಳ,ಬಂದರದ ದೀಪಗಳ ಗುರುತಿ

ನಿಂದ ಸರಸರ ನನ್ನನ್ನು ನಡೆಯಿಸಿಕೊಂಡು ದಡ ಸೇರಿದನು. ಎಲ್ಲರೂ ಹೋಗಿ ನಿಂತು ಒದ್ದೆ ಅರಿವೆಗಳನ್ನು ಹಿಂಡಿಕೊಂಡು, ಗಾಡಿ ಏರುವ ತಯಾರಿಮಾಡಿದರು. ಒಮ್ಮೆಗೇ ಮದುಮಗನ ತಾಯಿ 'ಅಯ್ಯೋ, ನನ್ನ ಮಗುವೆಲ್ಲಿ' ಎಂದಳು. ದಿಬ್ಬಣದ ಯಜಮಾನನು ಮರುಳನ ಕೈ ಮೇಲಿರಿಸಿದ ಎಂಟಾಣೆ ಪಾವಲಿ ಕೆಳಕ್ಕೆ ಬಿದ್ದಿತು.

"ಅದು ಮದುಮಗನಿಲ್ಲದ ದಿಬ್ಬಣವಾಗಿತ್ತು. ಯಾವುದೋ ಒಂದು ಮತಾಯಿಯು ಗೋಣಿಯ ಬಾಣಿನಲ್ಲಿ ಕುಳಿತ ಆ ಹುಡುಗನನ್ನು ಅಪ್ಪಳಿಸಿ, ಸೆಳೆದು ಒಯ್ದುಬಿಟ್ಟಿತು. ಮೂರು ದಿನಗಳು ಕಳೆದರೂ ಆ ಹುಡುಗನ ಹೆಣವೂ ಕಾಣಸಿಗಲಿಲ್ಲ."

ಈ ಕಥೆಯನ್ನು ಕೇಳುವಾಗಲಂತು, 'ನಾನೇ ಆ ಮದುವಣಿಗನು. ಈ ಮುರುಕು ದೋಣಿಯನ್ನು ನಂಬಿ ಕೆಟ್ಟೆನಲ್ಲಾ' ಎಂದೆನಿಸಿತು ನನಗೆ.

ನನ್ನಬೆದರಿಕೆಯನ್ನುಕಂಡೋ ಏನೋ, ದೋಣಿಯು, ಬೇರೆ ಸಂಗತಿಯ ಕಡೆಗೆ ಮಾತು ಹರಿಸಿತು. "ಆ ಮೇಲೆ ಸಾವಿರ ಸಾರಿ ಗಂಗೊಳ್ಳಿ ಹೊಳೆಯಲ್ಲಿ ಜನರನ್ನು ನಾನು ದಾಟಿಸಿಲ್ಲವೇ!" ಎಂದು ಅದು ನನಗೆ ಅಭಯವನ್ನು ಹೇಳಿತು.

"ಆದರೆ ಈ ನಿನ್ನ ದೊಡ್ಡ ಜೀವವು ತಾಸಿಗೆ ಒಂದು ಮೈಲೂ ಸಾಗಲಾರದಲ್ಲ. ಕೆಲಸದ ತರಾತುರಿಯಿದ್ದವರು ನಿನ್ನನ್ನು ನಂಬಿದರೆ ಕಷ್ಟವಲ್ಲವೆ!"

"ಏನು ಕಷ್ಟ! ಮೋಟಾರಿಗೆ ಹಾಕುವಷ್ಟು ಪೆಟ್ರೋಲನ್ನು ಗೋಯಿಂದನ ಹೊಟ್ಟೆಗೆ ತುಂಬಿಸಿ ನೋಡಿ. 'ಲಾಂಚಿ'ನ ಅಪ್ಪನ ಹಾಗೆ ನಾನು ಹೋಗುತ್ತೇನೆ. ಮೊನ್ನೆ ಮೊನ್ನೆ ಈ ಊರಿನ ಮಣೆಗಾರರು ಬಂದು ಗೋಯಿಂದನನ್ನು ಕರೆದು— 'ಗೋಯಿಂದ, ಈಗ ಎಲ್ಲೆಲ್ಲೂ ಯುದ್ಧ ಶುರುವಾಗಿಬಿಟ್ಟಿದೆ. ಸರಕಾರಕ್ಕೆ, ಎಲ್ಲಾ ದೋಣಿಗಳ

ಲೆಕ್ಕ ಬೇಕಾಗಿದೆ. ನಿನ್ನ ದೋಣಿಯೆಂದರೆ 'ಕಡಲಿನ ನಗ' ಎಂದು ಬರಾಯಿಸಿದ್ದೇನೆ' ಎಂದು ಬಹು ಚಂದವಾಗಿ ಮಾತನಾಡಿ, ಉಪ್ಪಿನ ಕುದುರಿಗೆ ನನ್ನಲ್ಲೇ ಕುಳಿತು ಹೋದರು. ಅವರು ತಮ್ಮ ಕುಟುಂಬ ಸಮೇತ ಕೊಲ್ಲೂರು ಯಾತ್ರೆ ಮಾಡುವುದುಂಟಂತೆ. ಆಗ ನನ್ನಲ್ಲಿಯೇ ಕುಳಿತುಕೊಂಡು ಹೋಗುತ್ತೇನೆ ಎಂದು ಆಣೆಮಾಡಿ ಹೇಳಿದ್ದಾರೆ."

ಅಂತು ಬೆಳಗಾಗುವಾಗ, ನಾನಿರುವಲ್ಲಿಗೆ, ಹೊಸ ಪೆಟ್ರೋಲನ್ನು ತುಂಬಿಸಿಕೊಂಡು ಗೋಯಿಂದ ಬಂದನು. ದೋಣಿಯ ಒಳಗಡೆ ತುಂಬಿದ ನೀರನ್ನು ತೆಗೆದು ಚೆಲ್ಲಿ ತಿರುಗಿ ಪಯಣತೊಡಗಿಸಿದನು. ಬಿಸಿಲು ನನ್ನ ಹಣೆಯನ್ನು ಚೆನ್ನಾಗಿ ಕಾಯಿಸುವ ಗಳಿಗೆಗೆ ನಾನು ಸೌಡವನ್ನು ಸೇರಿದೆ. 'ಅಯ್ಯ, ರಾತ್ರಿ ನೀವು ಹಿಂಪಕ್ಕೆ ಹೊರಡುವವರಾದರೆ ನಾನು ಇಲ್ಲಿಯೇ ನಿಂತಿರುತ್ತೇನೆ' ಎಂದನು ದೋಣಿಕಾರ.

"ನನಗೆ ಕಳೆದ ರಾತ್ರಿಯ ಹಿಮ, ನೀರುಗಳಿಂದ ಶೀತ, ನಿಮೋನಿಯ ಆಗದೆ ನಾನು ಬದುಕಿ ಉಳಿದರೆ ನೋಡುವ" ಎಂದೆ.

ಆ ದೋಣಿಯು "ನನಗೆ ನಿಮೋನಿಯ ಈತನಕ ಆಗಿದ್ದರೆ, ನಿಮಗೆ ಆಗುವುದು?" ಎಂದಿತು.



# M T 309571

ಅಥವಾ

# ಆಶಾಪತ್ರ

ಎಲ್ಲೋ ಒಂದು ದಿವಸ ನಗರವಾಸದ ಮೇಲೆ ನಾನು ಸಿಟ್ಟಿಗೆದ್ದು, ಗ್ರಾಮಾಂತರ ಜೀವನಕ್ಕೆಂದು ಹೊರಟೆ. ನಾಸಿರುವ ಪಟ್ಟಣವು ಚಿಕ್ಕದಾದರೂ, ಪೇಟೆ ಪಟ್ಟಣಗಳ ಕಾಯಿಲೆಗಳೆಲ್ಲ ಅದರಲ್ಲಿವೆ. ಅವೇ ವರ್ತಮಾನ ಪತ್ರಗಳು, ಅವೇ ರಾಜಕೀಯ, ಅವೇ ಠಕ್ಕು, ಅವೇ ಹಾಳು ಹರಟೆಗಳು — ಒಂದಿಷ್ಟು ಬದಲಾವಣೆ ಬೇಡವೇ? ಹಾಗೆಂದು ಹತ್ತೆಂಟು ಮೈಲು ದೂರದ ಒಂದುಹಳ್ಳಿಯನ್ನು ಸೇರುವ ಮನಸ್ಸು ಮಾಡಿದೆ. 'ಬೇಕ್ ಟು ಏ ವಿಲೇಜ್' ಎಂದು 'ದೇ.ಭ.'ಗಳು ನುಡಿವಂತೆ. ಹಾಗೆಂದರೆ ಅಲ್ಲೇ ಬಿಡಾರ ಮಾಡಿ ನೆಲೆಸಿಲ್ಲುವುದಕ್ಕಲ್ಲ. ಕೆಸರಿಗೆ ಕೈಸೋಲುವ ನನ್ನ ಮೈಯು ಹಾಗೆ ಮಾಡುವುದು ಅನುಮಾನವೇ. ಆದರೂ ನಾಲ್ಕು ದಿನ ಅಲ್ಲಿ ಇದ್ದು ಬರುವ; ಹಳ್ಳಿಯ ಸರಳ ಜೀವನ, ಅರಣ್ಯದ ನಿಸರ್ಗ ಜೀವನ, ಬುದ್ಧಿಯ ಕ್ಷ್ಮಾಮಜೀವನ-- ಎಲ್ಲವುಗಳ ಸವಿ ಮಿಶ್ರಣದ ಸುಖವನ್ನು ಅನುಭವಿಸಿ ಬರುವ ಎಂದು ಹೊರಟೆ.

ಹಳ್ಳಿಯವರೇನೋ ಪೇಟೆಯವರನ್ನು ಕಂಡು, ತಮಗೆ ವಿಶ್ವಾಸವಾದಲ್ಲಿ ತುಂಬಾ ಉಪಚರಿಸುವವರೇ. ಏನಿಲ್ಲದೆ ಹೋದರೂ, ಯಾವ ಹಳ್ಳಿಯಲ್ಲೇ ಆಗಲಿ, 'ಬಾಯಿ ಇರುವ ಮಗನು ನಾಲ್ಕು ದಿನ ಅಳಿಯರಾಯನಂತೆ ಗೌರವದಿಂದ ಹಾಲುಬಾಯಿ ಸಂಪಾದಿಸ ಬಹುದು.' ಹೀಗಿರಲು ನನಗೆ ಊಟದ ಯೋಚನೆಯಾಗಲಿಲ್ಲ. ನನಗೆಊಟ ಕೊಟ್ಟ

ಹಳ್ಳಿಯ ಹೆಸರನ್ನು ಬಯಲಿಗೆಳೆಯ ಬಾರದಷ್ಟೆ. ಅಂತೆಯೇ ಸದ್ಯಕ್ಕೆ ನಾನು ಹೋದ ಹಳ್ಳಿಯನ್ನು 'ಮೂಕೂರು' ಎಂದು ಕರೆಯುತ್ತೇನೆ.

ನನ್ನ ತಲೆಗೆ ಗ್ರಾಮಜೀವನದ ಪಿತ್ಥ ಅಡರಿದ ಮರುದಿವಸವೇ ನಾನು ಮೂಕೂರಿನ ಗುಡ್ಡಗಳಲ್ಲಿ ಬಂದಿಳಿದೆ. "ಓ ಇವರೆ, ನಮ್ಮ ನಾರಾಯಣ ಭಟ್ಟರ ಮನೆಯಾವುದು?" ಎಂದು ಕಂಡವರನ್ನು ಕೇಳಿ, ಕೇಳಿ, ಗುಡ್ಡಗಳನ್ನು ತಿರುಗಾಡಿ, ಅಲೆಪಲೆದು ಬೇಸತ್ತೆ. ನಾರಾಯಣ ಭಟ್ಟರು ಮೋಟರು ಹಾದಿಯಿಲ್ಲದ ಹಳ್ಳಿಯಲ್ಲೇಕೆ ತಮ್ಮ ಮನೆಮಾಡಿಕೊಂಡರು—ಎಂಬ ವಿಚಾರ ನನ್ನಲ್ಲಿ ಬಂದಿತು. ಆದರೂ ದಾರಿಯಲ್ಲಿ, ನನ್ನ ಬಿಸಿಲಿಂದ ಕಾವು ಏರಿದ ಮುಖವನ್ನು ಕಂಡ ಒಂದು ಮನೆಯವರು, ಕರೆದು ಎಳನೀರು ಕೊಟ್ಟರು. ಮತ್ತೊಂದು ಕಡೆ, ನನಗೆ ಬೆಲ್ಲನೀರಾಯಿತು. ಕೊನೆಗೆ ಬೇರೊಬ್ಬರು "ನೀವು ಅವರಿಗೆ ಆಪ್ತರೇ, ನಂಟರೇ?" ಎಂದು ಕೇಳಿ ನಾರಾಯಣ ಭಟ್ಟರ ಮನೆಯನ್ನು ತೋರಿಸಲು ನನ್ನೊಡನೆಯೇ ತಾವೂ ಬಂದರು.

ಭಟ್ಟರೋ—ಪುಣ್ಯವಶಾತ್ ಆ ದಿನ ತಮ್ಮ ಮನೆಯಲ್ಲಿದ್ದರು. ಮಹಾತ್ಮ ಗಾಂಧಿ ಖದ್ದರ್ ಉಡುಗೆಯಲ್ಲೇ ಅವರ ಊರಿಗೆ ಬಂದ ನನ್ನನ್ನು ಕಂಡ ಅವರು, 'ಯಾರಿರಬಹುದೆ'ಂದು ಯೋಚಿಸಿ ಯೋಚಿಸಿ, 'ನಾನೇ' ಬಂದುದಕ್ಕೆ ಬೆರಗಾಗಿ ಸ್ವಾಗತಿಸಿದರು. "ಬಡವನ ಮನೆಗೆ ಭಾಗೀರಥಿ ಬಂದ ಹಾಗಾಯಿತು" ಅಂದರು. ಅಭ್ಯಾಗತನಾದ ನಾನು ಭಾಗೀರಥಿಯಾದೆ. ಅವರು ನನ್ನ ಹಳೆಯ ಪರಿಚಯ. ಅಂದರೆ ಎಲ್ಲೋ ಒಂದೆಡೆ ನಾನು ಲೆಕ್ಚರ್ ಎಂಬ ಉಪನ್ಯಾಸ ಕೊಟ್ಟಾಗ ನನ್ನ ಅಪಾರವಾದ ವಿದ್ವತ್ತಿಗೆ ಬಲಿಯಾದ ಪತಂಗದಂತಿದ್ದ ಅವರು, ತಮ್ಮ ಗ್ರಾಮವನ್ನು ಪುನೀತವನ್ನಾಗಿ ಮಾಡಲು, ನನ್ನನ್ನು ಆಮಂತ್ರಿಸಿದ್ದರು. ಆರೇಳು

ವರ್ಷಗಳ ಬಳಿಕ ನಾನು ಆ ಹಳೆ ದಪ್ತರ ಬಿಡಿಸಿ, ಅವರ ಆಮಂತ್ರಣ ವನ್ನು ಆರಿಸಿ ಬಂದುದರಿಂದ ಅವರಿಗೆಷ್ಟು ಆನಂದವಾಗಬೇಡ!

ನನ್ನನ್ನು ಕರೆತಂದವನ ಹೆಸರು ರಾಮಣ್ಣ. ಅವನನ್ನು ಕುರಿತು ಭಟ್ಟರು—'ರಾಮಣ್ಣ, ಭೇಷ್ ಕೆಲಸ ಮಾಡಿದೆ. ನಮ್ಮೂರಿಗೆ ಇಂಥ ವರು ಬರುವುದೇ ಅಪೂರ್ವ. ಹೇಗೂ ಈಗ ಬಂದಿದ್ದಾರೆ. ಒಂದು ಲೆಚ್ಚಾರ್ ಇಡಿಸುವ; ಇವತ್ತೇ ನಮ್ಮ ಮಾಸ್ಟ್ರಿಗೆ ಹೇಳು, ಸಾಯಂಕಾಲ ಎಲ್ಲಾ ಮಕ್ಕಳನ್ನು ಶಾಲೆಯಲ್ಲೇ ಇರಿಸಿಕೊಳ್ಳಲಿಕ್ಕೆ. ಮಾಸ್ತರರು ಊರಿಗೆ ಲೆಚ್ಚರಿನ ಹೇಳಿಕೆ ಮಾಡಲಿ, ಏನು" ಎಂದರು. ರಾಮಣ್ಣನಿಗೆ ನನ್ನಂತೆ ಮಧ್ಯಾಹ್ನದ ಊಟ ಆಗಿರಲಿಲ್ಲ. ಊಟಕ್ಕೆಂದು ನನ್ನನ್ನು ನಂಬಿ ಬಂದ ಅವನು, ಈಗ ತುಸು ಉದಾಸೀನನಾದುದನ್ನು ಕಂಡು ನನಗೆ ಕಸಿಕರ ತೋರಿತು. ಭಟ್ಟರೇ—ನಾನು ಮೂರು ದಿನ ಇಲ್ಲಿ ಇರುವವ. ಲೆಕ್ಚರು ನಿಧಾನವಾಗಿ ಆಗಲಿ" ಎಂದೆ. ಅವರೂ ಒಪ್ಪಿದರು. ಸರಿ, ಮುಂದಿನ ಕೆಲವು ವಿಷಯಗಳನ್ನು ಸಾರಾಂಶವಾಗಿ ಹೇಳುತ್ತೇನೆ.

ಆ ದಿನ ನನಗೆ ಊಟ ಉಪಚಾರಗಳಾದುವು. ಮರುದಿನ ಊರ ಎಯಿಡೆಡ್ ಶಾಲೆಯಲ್ಲಿ ನನ್ನದೊಂದು ಭಾರಿ ಅಲ್ಲ-ಉದ್ದವಾದುದರಿಂದ "ದುಬಾರಿ" ಉಪನ್ಯಾಸವಾಯಿತು. ಅಲ್ಲಿಂದಲೇ ನಾನು, ಆ ಗ್ರಾಮದಲ್ಲಿ ತಹಶೀಲದಾರರ ಭರಾಮನ್ನು ಗಳಿಸಿಕೊಂಡೆ. "ನಾರಾಯಣ ಭಟ್ರೇ, ನಿಮ್ಮ ಲೆಚ್ಚರಿನವರನ್ನು ನಮ್ಮ ಮನೆಗೆ ನಾಳೆಗೆ ಕರೆದು ತನ್ನಿ; ಒಂದು ಸಣ್ಣ ಊಟದ ಶಾಸ್ತ್ರಮಾಡುವ" ಎಂದು ಆಮಂತ್ರಣಗಳು ಬರಲಾ ದುವು. ನಾನಿದ್ದ ಏಳು ದಿನಗಳಲ್ಲಿ ಹದಿನೆಂಟು ಆಮಂತ್ರಣಗಳು ಬಂ ದುವು. ಲೆಚ್ಚರಿನವರು ಎಚ್ಚರ ತಪ್ಪಿ ಊಟ ಉಪಚಾರಕ್ಕೆ ಸಿಲುಕಿದರು. ಅಂಥದೊಂದು ಅತಿಥಿ ಸತ್ಕಾರದ ಇತಿಹಾಸವನ್ನೇ ಹೇಳುತ್ತೇನೆ.

ಅದು ನನ್ನ ಉಪನ್ಯಾಸವಾದ ಮರು, ಅಲ್ಲ ಮರುದಿನ. ಊರಿನ ಪ್ರಮುಖ ಗೃಹಸ್ಥರಾದ ವಿಷ್ಣು ಶರ್ಕರತ್ತಾಯರ ಮನೆಯಿಂದ ನಮಗೆ ಔತಣದ ಆಮಂತ್ರಣ ಬಂದಿತ್ತು. ಅತಿಥಿಗಳು ನಾವು ಮೂವರು. ನಾರಾಯಣ ಭಟ್ಟರು, ಎಯಿಡೆಡ್ ಶಾಲಾ ಹೆಡ್ಮಾಸ್ಟರ್ ನಾಗಪ್ಪಯ್ಯಾವರು ಮತ್ತು ನಾನು. ರಾತ್ರೆ ಊಟಕ್ಕೆ ಕುಳಿತಿರುವ ಮುನ್ನ ನಮ್ಮೊಳಗೆ ಮೂರು ತಾಸಿನ ಮಾತುಕತೆಗಳು ನಡೆದುವು. ಮಾಸ್ಟರರಂತು ಆ ಊರಿನ "ರೇಡಿಯೋ ರಿಸೀವರೇ" ಎಂದೆನಿಸಿತು ನನಗೆ. "ಹಿಟ್ಲರನು ಯಾವ ಊರಲ್ಲಿ ಬಾಂಬು ಹಾಕಿದನು, ಜಪಾನಿ ಬಾಂಬುಗಳು ಮಂಗಳೂರಿನ ಯಾವ ಬೀದಿಯಲ್ಲಿ ಬಿದ್ದುವು" ಎಂದು ಅವರು ಸವಿವರವಾಗಿ ತಿಳಿಸಿದರು. ಅವರಿಗೆ "ಆಯಾಯ ದಿನದ ಪೇಪರು ಅದೇ ಅದೇ ದಿನವೇ ಬರುತ್ತದೆ" ಎಂದರು ನಾರಾಯಣ ಭಟ್ಟರು. "ಅವು ಅವರಿಗೆ ಮೂರು ದಿನ ಮುಂಚಿತವಾಗಿಯೇ ಬರುತ್ತಿರಬೇಕು" ಎಂದು ನನಗನಿಸಿತು.

ಯುದ್ಧದ ತೀರ್ಮಾನವನ್ನು ಮುಂದುವರಿಸುತ್ತ ಮಾಸ್ಟರರು — "ಶರ್ಕರತ್ತಾಯರೇ, ಇವತ್ತು 7ನೇ ನಂಬರು ಎದ್ದಿತು. ನಾನು 6ಕ್ಕೆ ಕಟ್ಟಿಮೋಸಹೋದೆ. ಮೊನ್ನೆಯಾಗಿದ್ದರೆ 6ನೇ ನಂಬರಿಗೆ ನನಗೆ 12 ರೂಪಾಯಿ ತಿರುಗಿತು. ಈ ದರಿದ್ರ ಶಾಲೆಯ ಗ್ರಾಂಟು ಬಾರದೆ ನನ್ನ ಕೈ ಕಟ್ಟಿ ಬಿಟ್ಟಿದೆ. ಇಲ್ಲವಾದರೆ ಖಂಡಿತ 100 ರೂಪಾಯಿ ಹೊರಡಿಸುತ್ತಿದ್ದೆ" ಎಂದರು.

"ನೀವು ಹುಷಾರು ಮಾಸ್ತರೇ, ನಿಮ್ಮ ದೆಸೆ ಗಟ್ಟಿಯಿದೆ" ಎಂದರು ಅವರು.

"ನನಗೆ ನಮ್ಮ ಗಣಪತಿ ಭಟ್ಟರ ಫಲ ಜೋತಿಷ್ಯದಲ್ಲಿ ನಂಬಿಕೆ. ಅವರು 'ನೀನು ಒಳ್ಳೆಯದಾದರೆ ಇದರಿಂದಲೇ ಆಗುವುದು' ಎಂದಿದ್ದಾರೆ — ನನಗೂ ಅದರಲ್ಲಿಯೇ ನಂಬಿಕೆ" ಎಂದರು.

“ಗಣಪತಿ ಭಟ್ಟರ ಜ್ಯೋತಿಷ್ಯ ಮಾತ್ರ ಬ್ರಹ್ಮವಾಣಿ” ಅಂದರು ನಾರಾಯಣ ಭಟ್ಟರು. “ಸ್ವಾಮಿ, ನಿಮಗೆ ಜಾತಕ, ಜ್ಯೋತಿಷ್ಯಗಳಲ್ಲಿ ಹೇಗೆ” ಎಂದು ನನ್ನನ್ನು ಕೇಳಿದರು. ನನಗೆ ಹಸಿವೆಯಿಂದ ತೂಕಡಿಕೆ ಬಂದಿತ್ತು “ಹೂಂ, ನಂಬಿಕೆ ಇದೆ ಎಂದರೆ ಇದೆ, ಇಲ್ಲ ಅಂದರೆ ಇಲ್ಲ” ಎಂದು ಉತ್ತರವಿತ್ತೆ.

ಅಡುಗೆಯ ಮನೆಯಿಂದ ಕರೆ ಬಂದಿತು. ನಾವೆಲ್ಲ ಅನ್ನಪೂರ್ಣಾ ದೇವಿಗೆ ಯಥಾನುಶಕ್ತಿ ಸೇವೆಯನ್ನು ಸಲಿಸಲು ನಡೆದೆವು. ಊಟದ ಕಾಲದಲ್ಲೂ ನ್ಯೂಯಾರ್ಕ್ ಕಾಟನ್ ನಂಬರುಗಳೇ ಏಳುತ್ತ ಬೀಳುತ್ತಿದ್ದುವು. ಶರ್ಕರತ್ತಾಯರು ಒಮ್ಮೆ “ಮಾಸ್ತ್ರೆ, ಈ ಗಣಪತಿಯ ಭಟ್ಟರು ಹತ್ತು ವರ್ಷಕ್ಕೆ ಮೊದಲು ಹುಟ್ಟಿದ್ದರೆ, ನಾವು ನಮ್ಮ ಮನೆಗೆ ಚಿನ್ನದ ಹಂಚು ಹಾಕಿಸಬಹುದಿತ್ತು” ಎಂದರು. ನನಗಂತು ಅವರ ಮಾತು ಕೇಳಿ ಬೇಸರವಿಟ್ಟಿತ್ತು.

ಊಟವಾಗಿ ಅವರು ಇಸ್ಪೀಟಿಗೆ ಕುಳಿತರು. ನನ್ನ ಸ್ಥಿತಿ ಅಫೀಮು ಮೆದ್ದವರಂತಿದ್ದುದರಿಂದ, ನನಗೆ ದಿಂಬು ಚಾಪೆಗಳನ್ನು ಕೊಟ್ಟು, ಉಪ್ಪರಿಗೆಯಲ್ಲಿ ಮಲಗಿಸಿದರು. ಎದುರಿಗೆ ಒಂದು ದೀಪವನ್ನಿರಿಸಿ ಹೋದರು. ನಾನು ಒರಗಿಕೊಂಡೆ. ನಿದ್ರೆಮಾಡಲು ಧೈರ್ಯವಿಲ್ಲ. ಇವರು ನಡುರಾತ್ರಿಗೆ ಆಟ ಮುಗಿಸಿ, ‘ಮನೆಗೆ ಹೊರಡುವಾ’ ಎಂದರೆ—ನನಗೆ ನಿದ್ರೆಯ ಅಮಲು, ಕತ್ತಲುಗಳಲ್ಲಿ ಕಾಲುಗಳನ್ನೆಳೆದುಕೊಂಡು ಹೋಗಬೇಕಾದೀತಲ್ಲ — ಎಂಬ ಹೆದರಿಕೆ.

ಹಾಗೆಯೇ ಯೋಚನಾಪರನಾಗಿ ಕುಳಿತೆ. ಎದುರಿನ ದೀಪವನ್ನು ನೋಡಿದೆ. ಕುರುಡು ತಾಮ್ರದ ಕೈದೀಪವದು. ಅದನ್ನು ಕಂಬಕ್ಕೆ ತಗಲಿಸಿದ್ದರು. ಅದರ ಬೆಳಕಿನಲ್ಲಿ ಒಂದು ಚೂರು ಕಾಗದವನ್ನು ಗೋಡೆಗೆ ಅಂಟಿಸಿದುದು ಕಾಣಿಸಿತು. ಎವೆಯಿಕ್ಕದೆ ನೋಡಿದೆ. 'M T' 309571

ಎಂಬಂತೆ ಅಂಕೆ ಕಾಣಿಸಿತು! ಇದೇನು—.M T' ಎಂದೆ. 'ಎಮ್ಟಿ' ಎಮ್ಟಿ'ಎಂದು ಅದರಿಂದ ಶೂನ್ಯಾರ್ಥವನ್ನು ತರ್ಕಮಾಡಿದೆ. ಅದನ್ನು ನೋಡಲೇಬೇಕೆಂದು ಸಮೀಪಿಸಿದೆ. ಆ ಚೀಟಿಯು ನನ್ನನ್ನು ದುರದುರ ನೋಡಿತು. ಅದರ ಮೈಬಣ್ಣ ಮಾಸಿಹೋಗಿತ್ತು. ಬರಿಯ ಅಂಕೆಯಷ್ಟೇ ನನ್ನನ್ನು ಕಾಣುತ್ತಿತ್ತು. ದೀಪ ಎತ್ತಿ ಹಿಡಿದೆ. ಅಲ್ಲಿದ್ದುದು ಅದೊಂದೇ 'M T' ಯಲ್ಲ. ಜತೆಗೆ ಇನ್ನೆಷ್ಟೋ ಇದ್ದುವು. ಆಚೀಚೆ ನೋಡಿದೆ. ಇನ್ನೂ ಇನ್ನೂ ನಂಬರುಗಳೇ ಕಾಣಿಸಿದುವು. ದೀವಿಗೆ ಹಿಡಿದು ಆಚೀಚೆ ಅಷ್ಟು ಅಂಕೆಗಳ ಮುಂದೆ ನೋಡಿದೆ. ಅಮೇರಿಕ ಬ್ರಿಟನುಗಳ ಯುದ್ಧದ ಆಯುವ್ಯಯವು ಹೆಚ್ಚಲ್ಲ ಎಂದೆನಿಸಿತು. ನಕ್ಕು, ತಿರುಗಿ ದೀವಿಗೆಯನ್ನು M T 309571 ರ ಮುಂದಿರಿಸಿ ಒರಗಿದೆ. ದೃಷ್ಟಿ ಆ ನಂಬರನ್ನೇ ನೋಡುತ್ತಿತ್ತು! ಏನಿದು—M T 309571 ಎಂದು ನಕ್ಕೆ! ಅದೂ ನಕ್ಕಿತು. ನನಗೆ ಆಶ್ಚರ್ಯವಾಗಿ 'ನೀನಾರು? ಯಾಕೆ ನನ್ನನ್ನು ಕಂಡು ನಗುತ್ತೀ?' ಎಂದು ಕೇಳಿದೆ.

"ನಿನಗೆ ನನ್ನಂಥವನಲ್ಲಿ ವಿಸ್ಮಯವುಂಟಾದುದರಲ್ಲಿ ಅಚ್ಚರಿಯಿಲ್ಲ! ನಾನಾರೆಂದು ನಿನಗೆ ತಿಳಿಯದೇ; ನನ್ನ ಬಳಗದವರಿಗೆಷ್ಟು ಮನ್ನಣೆಯಿದೆ! ಎಷ್ಟು ಜೀವಗಳು ನನಗಾಗಿಯೆ ಬದುಕಿವೆ ಎಂದು ನಿನಗೆ ತಿಳಿದಿದೆಯೇ?" ಎಂದು ಅದು ಹೇಳತೊಡಗಿತು.

ನಾನು ಉದಾಸೀನನಾಗಿ-"ನೀನಾರು, ಕಾಗದದ ಚೂರು. ಚಿತ್ರವೂ ಅಲ್ಲ; ಗೋಡೆಯನ್ನೇರಲು, ಹಾಳು ಸಿನೇಮಾ ನಟಿಯರ ಮೂರ್ತಿಯೂ ನಿನ್ನಲಿಲ್ಲ. ಆದರೂ ಈ ಮನೆಯುವರು ನಿನಗೆ ಇಷ್ಟು ಮನ್ನಣೆ ಕೊಟ್ಟಿರೇಕೋ ತಿಳಿಯೆ" — ಎಂದಂದುಕೊಂಡೆ!

ಅದು ಬಲು ಹಟವಾದಿ ಕಾಗದ. ನನಗೆ ಅದರಲ್ಲಿ ವಿಶ್ವಾಸ ಬರಲಿ

ಎಂಬ ಚಲದಿಂದಲೋ ಏನೋ, ಮತ್ತೂ ಮತ್ತೂ ನನ್ನಿಂದ ಮಾತನ್ನು ಬೇಡುವಂತೆ ಕಂಡಿತು.

"ಹೋಗಲಿ ನೀನಾರು?" ಎಂದು ತಿರುಗಿ ಕೇಳಿದೆ!

"ನಾನೇ ಕಾಗದ; ಕರೆನ್ಸಿ ನೋಟಿಗೂ ಹಿರಿದಾದವ. ನನಲ್ಲಿರುವ ಅಂಕೆಗಾಗಿ ಈ ಮನೆಯ ಶರ್ಕರತ್ತಾಯರು ತಮ್ಮ ಯಾವತ್ತೂ ಆಸ್ತಿ ಪಾಸ್ತಿಗಳನ್ನೂ ಕಳೆದುಕೊಳ್ಳಲು ಅಣಿಯಾದರು" ಎಂದಿತು.

"ಹಾಗೇನು—? ನಿನ್ನಂತೆ ಇನ್ನೂ ಒಂಬತ್ತು ಕಾಗದಗಳು ಕೆಳಗಿವೆ; ಸುತ್ತ ಇನ್ನಷ್ಟು ಕಾಗದಗಳಿವೆಯಲ್ಲ."

"ನನ್ನ ಕುಟುಂಬವೇ ಅಂಥದು. ನಾನು ಅನೇಕರಿಗೆ ಭಾಗ್ಯ ತಂದೆ; ಅನೇಕರ ಭಾಗ್ಯ ಕಳೆದೆ. ಗೋವೆ ನನ್ನ ತವರು ಮನೆ. ಶರ್ಕರತ್ತಾಯರು ಪ್ರತಿ ಬಾರಿಯೂ ನನಗಾಗಿ ಹಣವನ್ನು ತೆತ್ತು, ತರಿಸಿಕೊಂಡರು. ಒಮ್ಮೆ ನನಗೆ ಕೊಟ್ಟ ಒಂದೇ ರೂಪಾಯಿ ಬೆಲೆಗೆ ಸಾವಿರ ರೂಪಾಯಿಗಳನ್ನು ದಾನಮಾಡಿದೆ. ಅಂದಿನಿಂದ ಅವರು ನನ್ನನ್ನು ತಿರುಗಿ ತಿರುಗಿ ವಂದಿಸಿ ಊಟಬಿಟ್ಟರು, ಮಕ್ಕಳ ಸುಖಕ್ಕೆ ಬಾಯಿಕಟ್ಟಿದರು, ಕೊನೆಗೆ ಈಗಿರುವ ಮನೆಯನ್ನು—ಹೆರರಿಗೆ ಅಡವಿಟ್ಟರು."

"ನೀನೊಬ್ಬನೇ ಅಷ್ಟು ಕೆಲಸಮಾಡಿದೆಯಾ? ಅಷ್ಟು ಶಕ್ತಿಯೇ ನಿನಗೆ?"

"ಶರ್ಕರತ್ತಾಯರಿಗೇನು; ಅವರ ಹಿರಿಯರಿಗೂ ಅದೇ ಗತಿಯನ್ನು ತೋರಿಸಿದವ ನಾನು. ಈ ಮನೆಯ ಕಥೆ ಕೇಳು. ಇದು ಅವರ ಅಜ್ಜನು ಕಟ್ಟಿಸಿದ ಮನೆ. ಅವರು ತುಂಬ ಶ್ರೀಮಂತರು. ಸಾಯುವಾಗ ೫೦೦ ರೂಪಾಯಿ ಕಂದಾಯ ಕೊಡುವ ಆಸ್ತಿ ಅವರಿಗಿತ್ತು.

"ಅನಂತರ ಅವರ ಮಗ ಪಟ್ಟಕ್ಕೆ ಬಂದರು. ಅವರು ನನಗಾಗಿ ದುಡಿದರು. ಅನೇಕ ನಂಬರುಗಳ ಸೋಡ್ತಿ ಟಿಕೇಟುಗಳನ್ನು ತರಿಸಿ

ತರಿಸಿ, ಕೊನೆಗೆ ಸಾಲಗಾರರಾದರು. ಈ ಮನೆಮಾರುಗಳು ಪರರ ಕೈ ಸೇರಿದುವು. ಅವರ ಬಳಗ ಕಂಗಾಲಾಯಿತು. ಆಗ ಈ ಹುಡುಗ ಚಿಕ್ಕವನಿದ್ದ, ೧೨ ವರ್ಷದವ. ತಂದೆಯು ತರಿಸಿ ವ್ಯರ್ಥವಾದ ಸೋಡ್ತಿ ಟಿಕೇಟುಗಳನ್ನೆಲ್ಲಾ ಹೀಗೇನೇ ನನ್ನ ಜತೆಗೆ ಗೋಡೆಗೆ ಚಂದವಾಗಿ ಅಂಟಿಸುತ್ತಿದ್ದರು. ಅವರಲ್ಲಿ ಕೊನೆಯವನೇ ನಾನು. ನನ್ನ M T 309571 ನ್ನು ಪಡೆಯಲು ಇವನ ತಂದೆ ತನ್ನ ಪತ್ನಿಯ ಆಭರಣಗಳನ್ನು ಒತ್ತೆಯಿಟ್ಟರು. ಆ ಅಂಕೆಯಿಂದಲೇ ಅವರಿಗೆ ಲಕ್ಷ ರೂಪಾಯಿ ಲಾಭವಾದೀತೆಂದು- ಒಬ್ಬರು ಜೋಯಿಸರು ಅವರಿಗೆ ಹೇಳಿದ್ದರು. ಅದಕ್ಕಾಗಿ ಅಷ್ಟೆಲ್ಲ ಶ್ರಮವನ್ನುವಹಿಸಿದರು. ನಾನು ಮುಂಬಯಿಯಲ್ಲಿ ಒಬ್ಬ ಅಂಗಡಿಗಾರನಲ್ಲಿದ್ದೆ. ಅವನಿಗೆ ಒಂದಕ್ಕೆ ಹತ್ತರಂತೆ ಬೆಲೆಯನ್ನುಕೊಟ್ಟು ನನ್ನನ್ನು ತರಿಸಿಕೊಂಡರು. ಆದರೆ ನಾನು ಅವರಿಗೆ ಮರಳಿ ಲಾಭ ತರಿಸಿ ಕೊಡಲಿಲ್ಲ. ಆ ಸಿಟ್ಟಿನಿಂದ ನನ್ನನ್ನುಅವರು ಹರಿದೆಸೆದರು. ನನ್ನ ಬಣ್ಣಕ್ಕೆ ಮೆಚ್ಚಿದ ಚಿಕ್ಕ ಶರ್ಕರತ್ತಾಯರು ನನ್ನನ್ನು ಕೂಡಿಸಿ ಅಂಟಿಸಿ, ಇಲ್ಲಿರಿಸಿದರು.”

“ಆ ಮೇಲೆ — ?”

“ಆ ಮೇಲೆ ಅವರು ಮನೆಯನ್ನುಬಿಟ್ಟುಅಲೆದರು. ಮನೆಯನ್ನು ಒತ್ತೆಯಿಟ್ಟುದಣಿದರು . . . ಕೊನೆಗೆ ನಿರಾಶೆಯಿಂದಲೇ ತೀರಿಕೊಂಡರು. ಅವರ ಮಗನೇ ನಿಮ್ಮ ಔತಣವೇರ್ಪಡಿಸಿದವರು. ಅವರ ಮೇಲಣ ಮಮತೆಯಿಂದ, ಸಾಲಗಾರರು ಈ ಮನೆಯನ್ನು ಅವರಿಗಾಗಿ ಬಿಟ್ಟರು. ಅವರಿಗೆ ಪ್ರಾಯ ಬರಲು ತಿರುಗಿ ನನ್ನ ನೆನಹನ್ನು ಮರೆಯದೆ ಬಂದರು. ಆದರೆ ಅವರು ಈಗ ಹೆಸರಿಗಷ್ಟೆ ಶ್ರೀಮಂತರಾಗಿದ್ದಾರೆ. ನನಗಾದರೂ ಅವರ ಶಕ್ತಿಯನ್ನು ತೂಗಿ ಒಂದಲ್ಲ ಒಂದು ದಿನ ಅವರನ್ನು ಉದ್ಧರಿಸುವ ಇಷ್ಟವಾಗಿದೆ. ಆದರೆ ಅವರ ಶ್ರದ್ಧೆ, ಇಂದು, ನನ್ನಿಂದ ತಪ್ಪಿ

ಬಿಟ್ಟಿದೆ. ಕ್ರಾಸ್‌ವರ್ಡ್ — ಕಾಟನ್ — ಎಂದು ಬೇರೆಯೇ ಸಂಗತಿಗಳಲ್ಲಿ ವಿಶ್ವಾಸ ಹಿಡಿದಿದ್ದಾರೆ. ಇತ್ತ ನನಗೂ ಈ ದೇಶದ ಮನ್ನಣೆ ನಿಂತುಹೋಗಿದೆ. ಹೀಗಿರಲು ನಾನು ಅವರನ್ನುಏಕೆ ಉದ್ಧರಿಸಬೇಕು?"

"ಈ ತನಕ ಉದ್ಧರಿಸಿದಂತೆ!" ಎಂದು ನಕ್ಕೆ

"ಏ ಮರುಳೇ—ನೀನೊಮ್ಮೆ ನನ್ನನ್ನು ನಂಬು. ಆಗ ಬಾಳ್ವೆಯು ಆಶಾವಿಮಾನವನ್ನೇರಿ ಸಾಗಬಹುದೆಂಬುದನ್ನು ತೋರಿಸುವೆ. ಆಗ ಎಂಥ ಸುಖ ಸ್ವಪ್ನಗಳನ್ನು ಸವಿಯಬಹುದೆಂದು ತಿಳಿಯುವೆ."

ಅಷ್ಟರಲ್ಲೇ-ನನ್ನ ಗೆಳೆಯರು ತಮ್ಮ ಆಟಮುಗಿಸಿ ಮೇಲಕ್ಕೆ ಬಂದು "ನಿದ್ರೆ ಬಾರದಿದ್ದರೆ, ಮನೆಗೆ ಹೋಗುವ" ಎಂದರು ನಾರಾಯಣ ಭಟ್ಟರು. ಶರ್ಕರತ್ತಾಯರು"ಅವರು ಇಲ್ಲೇ ಮಲಗಲಿ,ನಾನು ಇದ್ದೇನೆ ಜತೆಗೆ. ಅಲ್ಲ; ಇವರಿಗೆ ಯಾವ ಆಟವೂ ಹಿಡಿಯುವುದಿಲ್ಲವಲ್ಲ ಭಟ್ರೇ" ಎಂದರು. ಮಾಸ್ಟರರು ನನ್ನನ್ನು ಕುರಿತು "ರಾಯರೇ, ನೀವು ಎಂದಾದರೂ ಕಾಟನ್ನಿಗೆ ಹಾಕಿದ್ದೀರೋ" ಎಂದರು. ನನಗೆ ಮಾಸ್ಟರರಂಥ ಅಂಕೆಯ ಜಾದುಗಾರರೊಡನೆ ರಾತ್ರಿ ಕಳೆಯಲು ಅಂಜಿಕೆಯಾಯಿತು. ಆ ಸ್ಥಳ, ಆ ಜನರನ್ನು ಬೀಳ್ಕೊಟ್ಟು ನಾರಾಯಣ ಭಟ್ಟರೊಡನೆಯೇ ಅವರ ಮನೆಗೆ ಹೊರಟೆ.

ನಡುರಾತ್ರಿ ಮೀರಿತ್ತು. ಅವರು ಕೈಯಲ್ಲಿ ಸೂಟೆ ಹಿಡಿದಿದ್ದರು. ಅದರ ಜಿಗುಜಿಗಿ ಬೆಳಕಿನಲ್ಲಿ ಹಾದಿ ಸಾಗಿದೆವು.

ನನಗೆ ತೀರ ಹೆಚ್ಚಿನ ಅಮಲು ತಲೆಗೇರಿತ್ತು. ನನ್ನ ಮುಂದೆ ಸೂಟೆಪಾಣಿಯಾಗಿ ಭಟ್ಟರು ಹೋಗುತ್ತಿದ್ದರು. "ರಾಯರೇ, ಇವತ್ತು ನರಿಯ ಮುಖ ನೋಡಿದ್ದೆ. ಮೂರು ರೂಪಾಯಿ ಆರಾಣೆ ಬಂದಿತು. ಶರ್ಕರತ್ತಾಯರಿಗೆ ಎರಡು ರೂಪಾಯಿ ನಾಮ! ಮಾಸ್ಟರಿಗೂ ಅಷ್ಟೇ ಕಾಸು ಹೋದೀತು" ಎಂದರು.

ನನಗೆ ಅವರ ಮಾತುಗಳಲ್ಲಿ ಆಸಕ್ತಿ ಉಂಟಾಗಲಿಲ್ಲ.

"ಇವತ್ತು 5 ನೇ ನಂಬರಿಗೆ ಹತ್ತು ರೂಪಾಯಿ ಹಾಕೆಂದು ಹೇಳಿ ಮೋಟಾರಿನವರೊಡನೆ ಹಣ ಮುಟ್ಟಿಸಿದ್ದೇನೆ. ಬಂದರೆ 90 ರೂಪಾಯಿ ಬರಬೇಕು; ಬಾರದೆ ಇರಲಾರದು. ಅಂದರೆ ಇವತ್ತು — ನನ್ನ ಜಾತಕದಲ್ಲಿ ಚೆನ್ನಾದ ದಿನ. ಪ್ರಜಾಮತದಲ್ಲಿ ತುಲಾ ರಾಶಿಗೆ ತುಂಬ ದ್ರವ್ಯ ಲಾಭವಿದೆ; ನಷ್ಟದ ಭಯ ಕಡಿಮೆ, ಇದ್ದರೂ ಅಲ್ಪ, ಅಲ್ಪವೆಂದರೆ ಹೆಚ್ಚಲ್ಲ — ಎಂದು ಬರೆದಿದ್ದಾರೆ. ಕೆಲಕೆಲವು ಸಾರಿ ಅದರಲ್ಲಿ ಹೇಳಿದ ಹಾಗೆಯೇ ಆಗುತ್ತದೆ ನೋಡಿ" ಎಂದರು.

ವಾರದ ಭವಿಷ್ಯದ ಈ ಭಕ್ತರ ಮಾತನ್ನು ಕೇಳುವ ಗಳಿಗೆಗೇನೆ, ನನ್ನ ಕಾಲ ಬೆರಳು ಹಾದಿಯಲ್ಲಿನ ಮರದ ಬೇರೊಂದಕ್ಕೆ ಬಡಿದು 'ಅಯ್ಯೋ!' ಎಂಬ ವಾಣಿಯು ನನ್ನ ಬಾಯಿಂದ ಹೊರಟಿತು. ಮುಂದೆ ನನಗೆ ನಿದ್ರೆ ಎಚ್ಚರವಾದುದಷ್ಟೇ ಅಲ್ಲ, ನನ್ನ ದಿಗಿಲೇ ಹಾರಿತು.

ಮರುದಿನ ನಾನು ನನ್ನ ಗ್ರಾಮವಾಸವನ್ನು ಮುಗಿಸಿದೆ. ಬರುವ ಬಸ್ಸಿನಲ್ಲಿ ಕುಳಿತರೂ ನನ್ನ ಮುಂದೆ M T 309571, ಏನೋ ರಾಶಿ, ೫ನೇ ನಂಬರು-ಒಂದೊಂದಾಗಿ ನಲಿಯುತ್ತಿದ್ದುವು. ಕೆಳಕ್ಕೆ ನೋಡಿದೆ! ನನ್ನ ಕಾಲಿನ ೫ನೇ ಬೆರಳು ೯ ಪಾಲು ಗಾತ್ರವಾಗಿ ಬಾತುಕೊಂಡಿತ್ತು.



ವಿಶ್ರಾಂತಿಯಾದರೂ ಸಿಗುತ್ತಿತ್ತು. ಈಗ ಅದೂ ದೊರೆಯದಾಗಿದೆ.

ನನಗೆ ಬಲು ದುಃಖವಾಯಿತು. ಪರಿತ್ಯಕ್ತ ಆ ದೀಪಸ್ತಂಭವನ್ನು ಕಂಡು, ನಿಜಕ್ಕೂ ಸೀತಾಮಾತೆಯಂತೆ— ಅಶೋಕವನದ ಸೀತೆಯಲ್ಲ —ರಾಮನಿಂದ 'ಶಿಕಾಯಿ'ಸಲ್ಪಟ್ಟ ಸೀತೆಯಂತೆ, ದುಶ್ಯಂತನಿಂದ ಸ್ಯಾಂಪಲ್ ನೋಡಿ ಬಿಡಲ್ಪಟ್ಟ ಶಕುಂತಲೆಯಂತೆ, ಅವಳು ಕಾಣಿಸಿದಳು.

ನಾನು — ಅಮ್ಮಾ!

ಅವಳು — ನೀನು ಧಾರವಾಡದವನೇ?

ನಾನು — ಏಕೆ ಹಾಗೆ ಹೇಳುವೆ?

ಅವಳು—ಧಾರವಾಡದವರು, ಪತಿವಿಯೋಗಿಗಳನ್ನು 'ಅಮ್ಮಾ' ಎಂದು ಕರೆಯುತ್ತಾರೆ. ನೀನು ನನ್ನನ್ನು ಅವಮಾನಿಸುವಿಯಾ?

ನಾನು—ಅಮ್ಮಾ, ನಿನ್ನನ್ನು ನಾನು ಹಾಗೆಂದೇನೆಯೆ? ನೀನು ಭರತ ಮಾತೆಯಂತಿರುವೆ; ಭರತ ಪತಿವಿಹೀನಳಾಗಿ ಆರ್ತಸ್ಥಿತಿಗೆ ಬಂದಿರುವ ನಿನ್ನನ್ನು ಕಂಡು ಅವಮಾನಗೊಳಿಸುವುದೇ? ಅಮ್ಮ, ಏತಕ್ಕೆ ನಿಂತಿರುವೆ ಇನ್ನು? ನವಯುಗವು ಬಂದಿದೆ! ವಿದ್ಯುತ್ ಗುಳ್ಳೆಗಳನ್ನು ಉರಿಸುತ್ತಿದ್ದಾರೆ! ನಿನ್ನನ್ನು ವಿಶ್ರಾಂತಿಗಾದರೂ ಒಯ್ಯಲಾರರೆ?

ಅವಳು — ಇಲ್ಲ. ನಾನು ಪ್ರಾಚೀನ ಯುಗದ ಮಾಸ್ತಿಕಲ್ಲಿನಂತೆ ಇಲ್ಲಿಯೇ ನಿಲ್ಲಬೇಕಾಗಿದೆ. ನನ್ನನ್ನು ನಟ್ಟುದೂ ಸೂತಕದಸ್ಮರಣೆಗಾಗಿ; ನಾನು ಉಳಿಯುವುದೂ ಅಷ್ಟಕ್ಕೇ!

ನಾನು — ಸೂತಕಕ್ಕಾಗಿ ನಟ್ಟರೇ?

ಅವಳು — ಕೆಳಗೆ ನೋಡು.

'ಇಂಥವರ........ಧರ್ಮಪತ್ನಿ ಇಂಥವರ........ಸಲುವಾಗಿ ಈ ದೀಪಸ್ತಂಭವನ್ನು ವಿರಾಜಿಸಲಾಗಿದೆ' ಎಂದು ಬರೆದಿತ್ತು.

ನಾನು — ಹೋ! ಪುಣ್ಯಕೆಲಸ. ಅಲ್ಪ ಬುದ್ಧಿಯುವರು, ಕಾರ್ತಿಕ ಮಾಸವೊಂದರಲ್ಲೇ, ಆಕಾಶಗೂಡನ್ನು ಏರಿಸುತ್ತಾರೆ. ಉಳಿದ ರಾತ್ರಿಗಳಲ್ಲೂ ಮಡಿದ ಆತ್ಮಗಳು ಹಾದಿ ತಪ್ಪಬಹುದೆಂದು ಈ ನಿನ್ನನ್ನು ನಟ್ಟರೇ? ಆದರೆ--ಆತ್ಮಗಳು ಮಂಗಳೂರಿನ ಈ ಹಾದಿಯಾಗಿ ಬರಲು ಕಾರಣವೆಂತು?

ಅವಳು--ನೀನು ವಿಚಾರಹೀನ. ನಟ್ಟರೆಂದ ಮಾತ್ರಕ್ಕೆ ಆಯಿತೇ? ನನ್ನಿಂದ ಯಾರಿಗೆ ಏನೂ ಆಗಲಿಲ್ಲ! ನನ್ನ ಮನೆಯನ್ನು ಬೆಳಗಿದವರಾರು?

ನಾನು— ಏಕೆ? ಬುರುಡೆ, ದೀಪ — ಎಲ್ಲ ಇದೆಯಲ್ಲ!

ಅವಳು— ನೋಡಪ್ಪ.

ನಾನು ಪತ್ತೇದಾರನಂತೆ, ಆ ಕಂಬವನ್ನೇರಿ ಒಳಗಿನ ಅವಯವಗಳನ್ನು ನೋಡಿದೆ. ತೆರಿಗೆಯಿಂದ ಒಡೆಯಲ್ಪಟ್ಟ ಪ್ರಜಾಜನರ ತಲೆ ಬುರುಡೆಗಳಂತೆ, ಅಲ್ಲಿನ ದೀಪದ ಬುರುಡೆಯಿತ್ತು. ಬುಡ್ಡಿ ಇತ್ತು, ಅದರಲ್ಲಿ ಬತ್ತಿ ಇದ್ದಿಲ್ಲ.

ಅವಳು — ತಿಳಿಯಿತೇ?

ನಾನು — ಬುರುಡೆ ದುರಸ್ತಿ ಇಲ್ಲ, ಬತ್ತಿ— ಗಿತ್ತಿ ಊಹೂಂ!

ಅವಳು— ಅದಿದ್ದರೂ ನನ್ನ ಅವಸ್ಥೆ ಒಂದೇ.

ನಾನು — ಏಕೆ?

ಅವಳು — ಇದನ್ನು ಉರಿಸುತ್ತಿದ್ದ ಸಾಬಿಗೆ ನನ್ನ ಮೇಲೆ ಮೊದಲಿನಿಂದಲೂ ಅನಾದರ. ನನ್ನ ಬಳಿಗೆ ಬಂದಾಗಲೆಲ್ಲ 'ಇಲ್ಲಿ ಉರಿಯುವ ದೀಪ ಬಡವರ ಮನೆಯನ್ನು ಬೆಳಗಲಿ!' ಎನ್ನುತ್ತಿದ್ದ.

ನಾನು — ನಿನ್ನನ್ನು ಉರಿಸಲೇ ಇಲ್ಲವೇ!

ಅವಳು — ಹಾಗೆ ಮಾಡಿದರೆ ಸಿಟ್ಟಾಗುವೆನೆಂದು, ಸ್ನಾನಮಾ

ನಿಂತಿರಬೇಕು.

ನಾನು — ಏನದು?

ಅವಳು — ಬೇಡ, ಹೋಗು, ನೀನೂ ಹಾಗೆ ಮಾಡಿಬಿಟ್ಟೀಯಾ. ಅಂದರೆ ಮುಂದೆ ಪತ್ರಿಕೆಗಳಿಗೆ ಬರೆಯುವ ಅಸಾಮಿಗಳಲ್ಲಿ ಒಬ್ಬನು ಇಲ್ಲದಂತಾಗಬಹುದು . . . . .

ನಾನು — ನಿನ್ನ ಮಾತೇ ತಿಳಿಯದು!

ಅವಳು — ಯಾರಿಗೂ ಹೇಳುವುದಿಲ್ಲವೆಂದರೆ ಮಾತ್ರ.

ನಾನು — ಇಲ್ಲ.

ಅವಳು — ನನ್ನನ್ನು ಇಲ್ಲಿ ಇರಿಸಿದ ಕಾರಣ ತಿಳಿಯದೇ? ಈ ನಗರದಲ್ಲಿ ನಿರುದ್ಯೋಗದ ಪ್ರಶ್ನೆ ಹೆಚ್ಚುತ್ತಿದೆಯಂತೆ. ಕಲಿತು ನಿರಾಶರಾದ ತರುಣರಿಗೆ ನಾನಾದರೂ ಆಶ್ರಯ ಕೊಡಲೆಂದು.

ನಾನು — ನೀಣು ಹಾ........

ಅವಳು — ಮೆಲ್ಲಗೆ ಮಾತನಾಡು. ಅಂಥವರು ಯಾವಾಗಲೂ ಇಲ್ಲಿ ಸಂಚರಿಸುತ್ತಿರುತ್ತಾರೆ. ಅವರಿಗೆ ತೊಂದರೆಯೆಂದರೆ- ಈ ವಿದ್ಯುತ್ ದೀಪ, ಆ ಮೇಲಿನ ಚಂದ್ರ. ಅವೆರಡು ಮರೆಯಾಗಿ ಬಿಟ್ಟರೆ........

ನಾನು — ಅಮ್ಮಾ, ನಿಜವಾಗಿಯೂ ನೀನು ಭಾರತಾಂಬೆಯ ಮಗಳು. ನಿನ್ನ ತಾಯಿ ಹೆರರಿಗೆ ಉಪಕಾರ ಮಾಡಿ, ಮನೆಮಕ್ಕಳನ್ನು ವನವಾಸವಿರಿಸಿದಂತೆ, ನೀನಾದರೂ ಉಪಕಾರ ಮಾಡುತ್ತಿರುವೆಯಲ್ಲ.

ದೂರದಿಂದ 'ಭಾರತ ಮಾತಾಕೀ ಜೈ' ಎಂಬ ಸದ್ದು ಕೇಳಿಸಿತು. ಇನ್ನು ಅಲ್ಲಿ ನಿಲ್ಲಲಾಗದೆಂದು ಹೊರಟೆ. ಈ ಪ್ರಸ್ತಾಪವನ್ನು ಯಾರಿಗೂ 'ಹೇಳಬಾರದೆ'ಂದು ವಚನವಿತ್ತುದರಿಂದ ಬರೆದಿಡಬೇಕಾಯಿತು. ಇದು ಈಗಿನ ಧರ್ಮಕ್ಕೆ ವಿರೋಧವಾಗಲಾರದಷ್ಟೆ?



# ಅಂಬಲದ ನೆನಪುಗಳು

ನಮ್ಮೂರವರು ಅರವಟ್ಟಿಗೆಗಾಗಿ ಕಟ್ಟಿಸಿದ ಚಾವಡಿಯನ್ನು, ಅಂಬಲವೆನ್ನುತ್ತಾರೆ. ಇದು ಒಂದು ರೀತಿಯಿಂದ ಛತ್ರವೆಂದರೂ ಸಲ್ಲು. ತ್ತದೆ. ಹಿಂದೆ ಹಾಗೆಲ್ಲಾ ಇದ್ದಿರಬೇಕು. ಈಗ ಹಾಗಿಲ್ಲ. ಈಗ ಅಂಬಲ ವೆಂದರೆ ಯಜಮಾನರು ಮರೆತ ಗೋವುಗಳು ಬಂದು, ರಾತ್ರಿಕಳೆಯುವ ಮನೆಯೆಂದರೂ ಸರಿಯೇ. ನಾನೆಷ್ಟೋ ಅಂಬಲ ಕಂಡಿದ್ದೇನೆ. ಅವ ರಲ್ಲಿ ಒಂದರ ನೆನಪು ಮಾತ್ರ ಬಲು ಚೆನ್ನಾಗಿ ಉಳಿದುದರಿಂದ ಈ ಲೇಖನವನ್ನು ತೊಡಗಿದ್ದೇನೆ. ಅದು ನನ್ನನ್ನು ಸಂಧಿಸಿದುದೂ, ನನ್ನೊ ಡನೆ ಪ್ರೀತವಾಣಿಯಿಂದ ನುಡಿದುದೂ ಆಶ್ಚರ್ಯವೆಂಬುದರಿಂದಲೇ ಬರೆಯುತ್ತಿದ್ದೇನೆ. ಅದರಿಂದಾಗಿ ನಮ್ಮ ಸಂಸ್ಕೃತಿಯ ಮೈಲಿಕಲ್ಲುಗ ಳಲ್ಲಿ ಈ ಅಂಬಲವೂ ಒಂದೆಂದು ನನ್ನ ನಂಬಿಕೆ.

ಈಗಿನದು ಮೋಟರುಗಳ ಯುಗ. ವಿಮಾನಯುಗವೆಂದರೂ ಸಲ್ಲುತ್ತದೆ-ಜಗತ್ತಿನ ಪಾಲಿಗೆ. ಹಿಂದುಸ್ಥಾನಕ್ಕೇನೋ ವಿಮಾನ ಬಂ ದಿದೆಯಾದರೂ ವಿಮಾನಯುಗ ಬಂದಿಲ್ಲ. ಜನರೇ ಹೊಟ್ಟೆಗಿಲ್ಲದೆ, ಹಗುರಾಗಿ ಗಾಳಿಯಲ್ಲಿ ಹಾರುತ್ತಿರುವಾಗ, ವಿಮಾನಗಳಿಗೇಕೆ ತೊಂ ದರೆ? ಹೋಗಲಿ – ನನ್ನ ಮೆಚ್ಚಿನ ವಾಹನವನ್ನು ಕುರಿತು ಹೇಳುತ್ತೇನೆ. ಅದು ಮೋಟರುಕಾರು ಅಲ್ಲ; ಬಸ್ಸೆಂಬ ಲಾರಿ. ಯಾರಾದರೂ ನನ್ನನ್ನು 'ನೀವು ಹೆಚ್ಚಾಗಿ ಇರುವುದೆಲ್ಲಿ?' ಎಂದು ಕೇಳಿದರೆ—'ಬಸ್ಸಿನ ಮೇಲೆ' ಎನ್ನುವುದು ನನ್ನ ರೂಢಿ. ಅಂಥ ಲಾರಿಯ ಮೇಲೆ ನನಗೆಷ್ಟು ವಿಶ್ವಾಸ ವಿರಬೇಡ!

ಒಮ್ಮೆ ನಾನು ನನ್ನ ಮೆಚ್ಚಿನ ವಾಹನವನ್ನೇರಿ ದಕ್ಷಿಣ ಕನ್ನಡ

ಡಿಕೆಗಳು ನನ್ನನ್ನು ಮಾನವ ಅವಸ್ಥೆಯಿಂದ ಮೇಲಕ್ಕೆ ಸೆಳೆದುಬಿಟ್ಟಿದ್ದವು. ಹೀಗಾಗಿ ಯಾವ ನೆನಪೂ ಇಲ್ಲದೆ, ನಡೆನಡೆದು ಸಾಗಿ—ಕೊನೆಗೊಂದು ಮೈಲಿಕಲ್ಲಿನೆದುರು ಹೋಗಿ ನಿಂತೆ. ತಿರುಗಿನೋಡಿದೆ. ಎದುರಿಗಿದ್ದ ಮನೆಯೇ ಛತ್ರ-ಎಂದು ತಿಳಿದೆ. ಛತ್ರದ ಅಂಗಳದಲ್ಲಿ ಕುಡಿಕೆ, ಮಡಿಕೆ, ಒಲೆಯ ಕಲ್ಲುಗಳು-ಕುರುಭೂಮಿಯಲ್ಲಿನ ತಲೆ ಓಡುಗಳಂತೆ ಉರುಳಿ ಬಿದ್ದಿದ್ದುವು.

ಛತ್ರವನ್ನು ಸಮೀಪಿಸಿದರೆ, ಚಾವಡಿಯಲ್ಲಿ ದಟ್ಟವಾಗಿ ಧೂಳು ಹಾಸಿದ್ದು ಕಾಣಿಸಿತು. 'ಯಾರಲ್ಲಿ?' ಎಂದು ಕೂಗಿದೆ. 'ಯಾರಿಲ್ಲ' ಎನ್ನುವವರೂ ಇಲ್ಲದಾಯಿತು. ಅದರ ಹಿಂದು ಮುಂದೆ ಅಲೆದಾಡಿದೆ, ಬಾವಿಯೊಂದು ಕಾಣಿಸಿತು. ಬಾವಿಗೆ ಹಗ್ಗವೂ ಇದ್ದಿರಲಿಲ್ಲ; ರಾಟೆಯೂ ಇದ್ದಿರಲಿಲ್ಲ. ಛತ್ರಕ್ಕೂ ಧರ್ಮಾರ್ಥ ಭೋಜನಕ್ಕೂ ಸಂಬಂಧ ಕಲ್ಪಿಸಿಕೊಂಡಿದ್ದ ನನ್ನ ಬ್ರಹ್ಮ ನಿಘಂಟು ಕಕ್ಕಾಬಿಕ್ಕಿಯಾಯಿತು.

ಮಾಡಲು ಬಗೆಯಿಲ್ಲದೆ, ಸಮೀಪ ಹೋಗಿ ಷರ್ಟಿನಿಂದಲೇ ಚಾವಡಿಯನ್ನು ಜಾಡಿಸಿ, ಅಲ್ಲಿ ಆಸೀನನಾದೆ. ಅಲ್ಲಿನ ಒಂದು ಕಂಬಕ್ಕೆ ಒರಗಿಕೊಂಡು ಕುಳಿತೆ. ನನ್ನನ್ನು ಕಡಿದ ಮೊದಲನೆಯ ತಗಣೆಯಿಂದಾಗಿ—ಅಲ್ಲಿ ಒಂದಲ್ಲ ಒಂದು ಕಾಲದಲ್ಲಿ ಮನುಷ್ಯವಾಸ ಇದ್ದಿರಬೇಕೆಂದೆನಿಸಿತು. ಪಾಪ, ನಾನು ನೀರಿಗಾಗಿ ತಪಿಸುತ್ತಿದ್ದಂತೆ ಆ ಬಡಪಾಯಿ ತಗಣೆಗಳು ಅಲ್ಲಿದ್ದುಕೊಂಡು ಮನುಷ್ಯನ ರಕ್ತಕ್ಕಾಗಿ ಯುಗಯುಗಗಳ ತಪಶ್ಚರ್ಯ ಸಾಧಿಸುತ್ತಿದ್ದಿರಬೇಕು. ಅಂತು ಅವುಗಳ ಇಷ್ಟವು ಸಿದ್ಧಿಸಿತು. ನನ್ನ ಗತಿಗೇಡಾಯಿತು.

ಹೊಟ್ಟೆಯ ಸಿಟ್ಟಿಗೆ—"ಯಾವ ಪುಣ್ಯಾತ್ಮನೋ—ಇದನ್ನು ಛತ್ರವೆಂದು ಕರೆದವನು" ಎಂದೆ. "ಹೂಂ" ಎಂದು ಧ್ವನಿ ಮರುಕಳಿಸಿತು. ಮಾಡಿನ ಸಂದಿನಿಂದ ಬಾವಲಿಗಳು ರೆಕ್ಕೆಬಡಿದು ಹಾರಾಡಿದುವು.

ಮಗ್ಗುಲ ಬಳಿಯ ಮರವೊಂದರಿಂದ ಗೂಬೆ ಘೂಂಕರಿಸಿತು. ಒಮ್ಮೆಗೇ ನನ್ನ ಮನಸ್ಸು ಕಕ್ಕಾಬಿಕ್ಕಿಯಾಗಿ—ಕಣ್ಣೆದುರು ನನ್ನ ಎಳೆತನದಿಂದ ಪ್ರೇರಿತವಾದ ಕೊಲೆ, ಪ್ರೇತ, ಕೀಳು, ಉಂಬಲ್ತಿ, ಬೊಬ್ಬರ್ಯಗಳಂತಹ ಅತಿಮಾನುಷ ಜೀವಿಗಳು ಕುಣಿಯತೊಡಗಿದುವು. ಹೊರಕ್ಕೆ ನೋಡಿದೆ. ಚಂದ್ರನು ಮುಳುಗಿದ್ದ. ಹಾದಿಯೂ ಕಾಣಿಸದಾಗಿತ್ತು. ಆ ಸ್ಥಿತಿಯಲ್ಲಿ ಪ್ರಯಾಣ ಮುಂದುವರಿಸುವ ಮಾತಿಲ್ಲ. ಕಿವಿ, ಕಣ್ಣು, ಬಾಯಿಗಳನ್ನೆಲ್ಲ ಮುಚ್ಚಿಕೊಂಡು ಅಲ್ಲೇ ಮಲಗಿಕೊಳ್ಳುವ ನಿರ್ಧಾರವನ್ನು ಮಾಡಿದೆ. ಯಾಕೋ ನನ್ನಷ್ಟಕ್ಕೆ—“ಮಲಗಿಕೊಂಡರೆ ನಿದ್ರೆ ಬಂದೀತೇ” ಎಂದು ಬಿಟ್ಟೆ! ಆ ಮಾತು ಯಾವನ ಕಿವಿಗೆ ಬಿದ್ದಿತೋ, ತಕ್ಷಣ ಉತ್ತರ ಬಂದಿತು. “ನಾನು ಇಲ್ಲಿ ಮಲಗಿದವ, ಇನ್ನೂ ಎಚ್ಚರವಾಗಿಯೇ ಇದ್ದೇನಲ್ಲ.” ನನ್ನ ಧೈರ್ಯವನ್ನೆಲ್ಲ ಗುಡಿಸಿ, ರಾಶಿಮಾಡಿ, ಮುಷ್ಟಿಯಲ್ಲಿರಿಸಿಕೊಂಡು —“ಯಾರಯ್ಯ ನೀನು?” ಎಂದು ಕೇಳಿದೆ.

“ನಾನೇ—ಈ ಅಂಬಲದ ವಾರೀಸುದಾರ” ಎಂದು ಉತ್ತರ ಬಂದಿತು.

“ವಾರೀಸುದಾರ? ಯಾರಿಲ್ಲದ ಬದುಕಿಗೆ?” ಎಂದೆ.

“ಇದು ನನ್ನಜ್ಜ ಕಟ್ಟಿಸಿದ ಅಂಬಲ.”

“ಇದು ಅಂಬಲವೇ? ಹಾಗಾದರೆ ಛತ್ರವಲ್ಲ.”

“ಅದೇ ಇದು.”

“ಇಲ್ಲಿ ಊಟ ಹಾಕುತ್ತಾರೆಯೇ..... ಎಂದಾದರೂ ಹಾಕಿದ್ದುಂಟೇ?”. ನಕ್ಕು ಉತ್ತರ ಬಂದಿತು “ಇದು ಅನ್ನ ಛತ್ರವಲ್ಲ. ನನ್ನ ಅಜ್ಜ ಬದುಕಿದಷ್ಟು ಕಾಲ ಇಲ್ಲಿ ಯಾರಿಗೂ ಒಲೆ ಹೊತ್ತಿಸಲು ಬಿಡುತ್ತಿರಲಿಲ್ಲ-ನೆಲ, ಗೋಡೆಗಳು ಮಸಿಯಾಗುತ್ತವೆಂದು. ಇಲ್ಲಿ ಬಿಸಿಲಿಗೆ

ತಕ್ಕ ಪ್ರದಕ್ಷಿಣೆ' ಬರತೊಡಗಿದ. ನಮ್ಮಪ್ಪನ ಕಾಲಕ್ಕೆ — ಆತನೂ ತೀರಿಕೊಂಡನು. ಆದರೆ ಯಾವಳೋ ಒಬ್ಬ ಮುದುಕಿ ತಾನಾಗಿಬಂದು,ಇಲ್ಲಿ ನೀರಿನ ಧರ್ಮವನ್ನು ಇರಿಸಿದಳು. ಮುದುಕಿ ಸತ್ತ ವೇಳೆಗೇ ಮೋಟರುಗಳ ಸಂಚಾರ ಮೊದಲಾಯಿತು. ಮುಂದೆ ಇಲ್ಲಿ ನೀರಿಗೆ ಬರುವವರು ಯಾರು?"

"ನೀನು ಕೊಲೆಯಾದೆ ಏಕೆ — ಅದನ್ನು ಹೇಳು."

"ನಮ್ಮಪ್ಪ ಅಜ್ಜನಿಂದ ಬಂದ ಹಣವೆಲ್ಲ ಬರಿದುಮಾಡಿದ. ತಾನಿರುವಷ್ಟು ಕಾಲ ಮೆರೆದಾಡಿದ. ಕೊನೆಗಾಲಕ್ಕೆ ಮಕ್ಕಳು ನಿರ್ಗತಿಕರಾದರೆ ಸಾಲದೆಂದು, ನನಗೊಂದು ಲಗ್ನಮಾಡಿಸಿಯೂ ಸತ್ತ. ಅವನ ಬದುಕು ಹಾಳಾಗಿ, ಹೊಟ್ಟೆಪಾಡಿಗೆ ನಾವು ಊರು ಬಿಟ್ಟು ಅಲೆಯುವಂತಾಯಿತು. ನಮ್ಮ ಅಂಬಲದಲ್ಲೇ ನಾನು ನಾಲ್ಕು ದಿನ ಬಿಡಾರಮಾಡಿದೆ. ಅದರ ಎದುರಿಗೇನೆ ಚಪ್ಪರಕಟ್ಟಿ, ಅಲ್ಲೊಂದು ಕಾಫಿ ಹೋಟೇಲನ್ನಿಟ್ಟೆ. ಕಂಡವರೆಲ್ಲ ನಕ್ಕರು. 'ಅಜ್ಜ ಅರವಟ್ಟಿಗೆಯಿಟ್ಟು ಪುಣ್ಯಕಟ್ಟಿಕೊಂಡ. ಅವನ ಮೊಮ್ಮಗ ಅದರ ಬಾಗಿಲಲ್ಲೇ ನೀರು ಮಾರಿ ಕಾಸು ಮಾಡುತ್ತಿದ್ದಾನೆ" ಎಂದರು.

"ನಾನೇನು ಮಾಡಲಿ ಹೇಳು. ನನಗೆ ಪ್ರಾಯ ಬರುವಾಗ ಅರವಟ್ಟಿಗೆಯಲ್ಲಿ ಜಲದಾನ ನಿಂತಿತ್ತು. ಊರ ಜನರು ಬರಿ ನೀರು ಕುಡಿಯಲು ಬರುತ್ತಿರಲಿಲ್ಲ. ಮೋಟಾರು ವಾಹನಗಳು ಚಲಿಸತೊಡಗಿ ಅಂಬಲ, ಅರವಟ್ಟಿಗೆಗಳಿಗೆ ದಿಕ್ಕಿಲ್ಲವಾಗಿತ್ತು. ಕೊನೆಗೆ ಅಂಬಲವೆಂಬುದು ಊರ ಭಾವಾಜಿಗಳಿಗೆ ಇದೊಂದು ಠಾಣೆಯಾಯಿತು. ಎಲ್ಲ ಭಂಗಿಮುಕ್ಕರೂ ಅಲ್ಲಿ ಬಂದು, ಒಲೆ ಉರಿಸಿ ಗೋಡೆ ಕರಿದುಮಾಡಿದರು. ಅದರದೇ ಮಾಡು ಕಿಟಿಕಿಗಳನ್ನು ಕಿತ್ತು, ಈ ತನಕ ಕಿಡಿಕಾಣದ ನೆಲದಲ್ಲಿ ಒಲೆ ಹೊತ್ತಿಸಿದರು.

ನನಗೆ ಅವರ ಮಾತುಗಳಲ್ಲಿ ಆಸಕ್ತಿ ಉಂಟಾಗಲಿಲ್ಲ.

"ಇವತ್ತು 5 ನೇ ನಂಬರಿಗೆ ಹತ್ತು ರೂಪಾಯಿ ಹಾಕೆಂದು ಹೇಳಿ ಮೋಟಾರಿನವರೊಡನೆ ಹಣ ಮುಟ್ಟಿಸಿದ್ದೇನೆ. ಬಂದರೆ 90 ರೂಪಾಯಿ ಬರಬೇಕು; ಬಾರದೆ ಇರಲಾರದು. ಅಂದರೆ ಇವತ್ತು—ನನ್ನ ಜಾತಕ ದಲ್ಲಿ ಚೆನ್ನಾದ ದಿನ. ಪ್ರಜಾಮತದಲ್ಲಿ ತುಲಾ ರಾಶಿಗೆ ತುಂಬ ದ್ರವ್ಯ ಲಾಭವಿದೆ; ನಷ್ಟದ ಭಯ ಕಡಿಮೆ, ಇದ್ದರೂ ಅಲ್ಪ, ಅಲ್ಪವೆಂದರೆ ಹೆಚ್ಚಲ್ಲ—ಎಂದು ಬರೆದಿದ್ದಾರೆ. ಕೆಲಕೆಲವು ಸಾರಿ ಅದರಲ್ಲಿ ಹೇಳಿದ ಹಾಗೆಯೇ ಆಗುತ್ತದೆ ನೋಡಿ" ಎಂದರು.

ವಾರದ ಭವಿಷ್ಯದ ಈ ಭಕ್ತರ ಮಾತನ್ನು ಕೇಳುವ ಗಳಿಗೆಗೇನೆ, ನನ್ನ ಕಾಲ ಬೆರಳು ಹಾದಿಯಲ್ಲಿನ ಮರದ ಬೇರೊಂದಕ್ಕೆ ಬಡಿದು 'ಅಯ್ಯೋ!' ಎಂಬ ವಾಣಿಯು ನನ್ನ ಬಾಯಿಂದ ಹೊರಟಿತು. ಮುಂದೆ ನನಗೆ ನಿದ್ರೆ ಎಚ್ಚರವಾದುದಷ್ಟೇ ಅಲ್ಲ, ನನ್ನ ದಿಗಿಲೇ ಹಾರಿತು.

ಮರುದಿನ ನಾನು ನನ್ನ ಗ್ರಾಮವಾಸವನ್ನು ಮುಗಿಸಿದೆ. ಬರುವ ಬಸ್ಸಿನಲ್ಲಿ ಕುಳಿತರೂ ನನ್ನ ಮುಂದೆ M T 309571, ಏನೋ ರಾಶಿ, ೫ನೇ ನಂಬರು-ಒಂದೊಂದಾಗಿ ನಲಿಯುತ್ತಿದ್ದುವು. ಕೆಳಕ್ಕೆ ನೋಡಿದೆ! ನನ್ನ ಕಾಲಿನ ೫ನೇ ಬೆರಳು ೯ ಪಾಲು ಗಾತ್ರವಾಗಿ ಬಾತುಕೊಂಡಿತ್ತು.



ವಿಶ್ರಾಂತಿಯಾದರೂ ಸಿಗುತ್ತಿತ್ತು. ಈಗ ಅದೂ ದೊರೆಯದಾಗಿದೆ.

ನನಗೆ ಬಲು ದುಃಖವಾಯಿತು. ಪರಿತ್ಯಕ್ತ ಆ ದೀಪಸ್ತಂಭವನ್ನು ಕಂಡು, ನಿಜಕ್ಕೂ ಸೀತಾಮಾತೆಯಂತೆ—ಅಶೋಕವನದ ಸೀತೆಯಲ್ಲ —ರಾಮನಿಂದ 'ಕಿಕಾಯಿ'ಸಲ್ಪಟ್ಟ ಸೀತೆಯಂತೆ, ದುಶ್ಯಂತನಿಂದ ಸ್ಯಾಂಪಲ್ ನೋಡಿ ಬಿಡಲ್ಪಟ್ಟ ಶಕುಂತಲೆಯಂತೆ, ಅವಳು ಕಾಣಿಸಿದಳು.

ನಾನು — ಅಮ್ಮಾ!

ಅವಳು — ನೀನು ಧಾರವಾಡದವನೇ?

ನಾನು — ಏಕೆ ಹಾಗೆ ಹೇಳುವೆ?

ಅವಳು—ಧಾರವಾಡದವರು, ಪತಿವಿಯೋಗಿಗಳನ್ನು 'ಅಮ್ಮಾ' ಎಂದು ಕರೆಯುತ್ತಾರೆ. ನೀನು ನನ್ನನ್ನು ಅವಮಾನಿಸುವಿಯಾ?

ನಾನು--ಅಮ್ಮಾ, ನಿನ್ನನ್ನು ನಾನು ಹಾಗೆಂದೇನೆಯೆ? ನೀನು ಭರತ ಮಾತೆಯಂತಿರುವೆ; ಭರತ ಪತಿವಿಹೀನಳಾಗಿ ಆರ್ತಸ್ಥಿತಿಗೆ ಬಂದಿರುವ ನಿನ್ನನ್ನು ಕಂಡು ಅವಮಾನಗೊಳಿಸುವುದೇ? ಅಮ್ಮ, ಏತಕ್ಕೆ ನಿಂತಿರುವೆ ಇನ್ನು? ನವಯುಗವು ಬಂದಿದೆ! ವಿದ್ಯುತ್ ಗುಳ್ಳೆಗಳನ್ನು ಉರಿಸುತ್ತಿದ್ದಾರೆ! ನಿನ್ನನ್ನು ವಿಶ್ರಾಂತಿಗಾದರೂ ಒಯ್ಯಲಾರರೆ?

ಅವಳು — ಇಲ್ಲ. ನಾನು ಪ್ರಾಚೀನ ಯುಗದ ಮಾಸ್ತಿಕಲ್ಲಿನಂತೆ ಇಲ್ಲಿಯೇ ನಿಲ್ಲಬೇಕಾಗಿದೆ. ನನ್ನನ್ನು ನಟ್ಟುದೂ ಸೂತಕದಸ್ಮರಣೆಗಾಗಿ; ನಾನು ಉಳಿಯುವುದೂ ಅಷ್ಟಕ್ಕೇ!

ನಾನು — ಸೂತಕಕ್ಕಾಗಿ ನಟ್ಟರೇ?

ಅವಳು — ಕೆಳಗೆ ನೋಡು.

'ಇಂಥವರ.......ಧರ್ಮಪತ್ನಿ ಇಂಥವರ.......ಸಲುವಾಗಿ ಈ ದೀಪಸ್ತಂಭವನ್ನು ವಿರಾಜಿಸಲಾಗಿದೆ' ಎಂದು ಬರೆದಿತ್ತು.

ನಾನು — ಹೋ! ಪುಣ್ಯಕೆಲಸ. ಅಲ್ಪ ಬುದ್ಧಿಯುವರು, ಕಾರ್ತಿಕ ಮಾಸವೊಂದರಲ್ಲೇ, ಆಕಾಶಗೂಡನ್ನು ಏರಿಸುತ್ತಾರೆ. ಉಳಿದ ರಾತ್ರಿಗಳಲ್ಲೂ ಮಡಿದ ಆತ್ಮಗಳು ಹಾದಿ ತಪ್ಪುಬಹುದೆಂದು ಈ ನಿನ್ನನ್ನು ನಟ್ಟರೇ? ಆದರೆ--ಆತ್ಮಗಳು ಮಂಗಳೂರಿನ ಈ ಹಾದಿಯಾಗಿ ಬರಲು ಕಾರಣವೆಂತು?

ಅವಳು—ನೀನು ವಿಚಾರಹೀನ. ನಟ್ಟರೆಂದ ಮಾತ್ರಕ್ಕೆ ಆಯಿತೇ? ನನ್ನಿಂದ ಯಾರಿಗೆ ಏನೂ ಆಗಲಿಲ್ಲ! ನನ್ನ ಮನೆಯನ್ನು ಬೆಳಗಿದವರಾರು?

ನಾನು— ಏಕೆ? ಬುರುಡೆ, ದೀಪ – ಎಲ್ಲ ಇದೆಯಲ್ಲ!

ಅವಳು— ನೋಡಪ್ಪ.

ನಾನು ಪತ್ತೇದಾರನಂತೆ, ಆ ಕಂಬವನ್ನೇರಿ ಒಳಗಿನ ಅವಯವಗಳನ್ನು ನೋಡಿದೆ. ತೆರಿಗೆಯಿಂದ ಒಡೆಯಲ್ಪಟ್ಟ ಪ್ರಜಾಜನರ ತಲೆಬುರುಡೆಗಳಂತೆ, ಅಲ್ಲಿನ ದೀಪದ ಬುರುಡೆಯಿತ್ತು. ಬುಡ್ಡಿ ಇತ್ತು, ಅದರಲ್ಲಿ ಬತ್ತಿ ಇದ್ದಿಲ್ಲ.

ಅವಳು — ತಿಳಿಯಿತೇ?

ನಾನು — ಬುರುಡೆ ದುರಸ್ತಿ ಇಲ್ಲ, ಬತ್ತಿ—ಗಿತ್ತಿ ಊಹೂಂ!

ಅವಳು— ಅದಿದ್ದರೂ ನನ್ನ ಅವಸ್ಥೆ ಒಂದೇ.

ನಾನು — ಏಕೆ?

ಅವಳು — ಇದನ್ನು ಉರಿಸುತ್ತಿದ್ದ ಸಾಬಿಗೆ ನನ್ನ ಮೇಲೆ ಮೊದಲಿನಿಂದಲೂ ಅನಾದರ. ನನ್ನ ಬಳಿಗೆ ಬಂದಾಗಲೆಲ್ಲ 'ಇಲ್ಲಿ ಉರಿಯುವ ದೀಪ ಬಡವರ ಮನೆಯನ್ನು ಬೆಳಗಲಿ!' ಎನ್ನುತ್ತಿದ್ದ.

ನಾನು — ನಿನ್ನನ್ನು ಉರಿಸಲೇ ಇಲ್ಲವೇ!

ಅವಳು — ಹಾಗೆ ಮಾಡಿದರೆ ಸಿಟ್ಟಾಗುವೆವೆಂದು, ಸ್ನಾನಮಾ

ನಿಂತಿರಬೇಕು.

ನಾನು — ಏನದು?

ಅವಳು — ಬೇಡ, ಹೋಗು, ನೀನೂ ಹಾಗೆ ಮಾಡಿಬಿಟ್ಟೀಯಾ. ಅಂದರೆ ಮುಂದೆ ಪತ್ರಿಕೆಗಳಿಗೆ ಬರೆಯುವ ಅಸಾಮಿಗಳಲ್ಲಿ ಒಬ್ಬನು ಇಲ್ಲದಂತಾಗಬಹುದು . . . . .

ನಾನು — ನಿನ್ನ ಮಾತೇ ತಿಳಿಯದು!

ಅವಳು — ಯಾರಿಗೂ ಹೇಳುವುದಿಲ್ಲವೆಂದರೆ ಮಾತ್ರ.

ನಾನು — ಇಲ್ಲ.

ಅವಳು — ನನ್ನನ್ನು ಇಲ್ಲಿ ಇರಿಸಿದ ಕಾರಣ ತಿಳಿಯದೇ? ಈ ನಗರದಲ್ಲಿ ನಿರುದ್ಯೋಗದ ಪ್ರಶ್ನೆ ಹೆಚ್ಚುತ್ತಿದೆಯಂತೆ. ಕಲಿತು ನಿರಾಶರಾದ ತರುಣರಿಗೆ ನಾನಾದರೂ ಆಶ್ರಯ ಕೊಡಲೆಂದು.

ನಾನು — ನೇಣು ಹಾ........

ಅವಳು — ಮೆಲ್ಲಗೆ ಮಾತನಾಡು. ಅಂಥವರು ಯಾವಾಗಲೂ ಇಲ್ಲಿ ಸಂಚರಿಸುತ್ತಿರುತ್ತಾರೆ. ಅವರಿಗೆ ತೊಂದರೆಯೆಂದರೆ- ಈ ವಿದ್ಯುತ್ ದೀಪ, ಆ ಮೇಲಿನ ಚಂದ್ರ. ಅವೆರಡು ಮರೆಯಾಗಿ ಬಿಟ್ಟರೆ........

ನಾನು — ಅಮ್ಮಾ, ನಿಜವಾಗಿಯೂ ನೀನು ಭಾರತಾಂಬೆಯ ಮಗಳು. ನಿನ್ನ ತಾಯಿ ಹೆರರಿಗೆ ಉಪಕಾರ ಮಾಡಿ, ಮನೆಮಕ್ಕಳನ್ನು ವನವಾಸವಿರಿಸಿದಂತೆ, ನೀನಾದರೂ ಉಪಕಾರ ಮಾಡುತ್ತಿರುವೆಯಲ್ಲ.

ದೂರದಿಂದ 'ಭಾರತ ಮಾತಾಕೀ ಜೈ' ಎಂಬ ಸದ್ದು ಕೇಳಿಸಿತು. ಇನ್ನು ಅಲ್ಲಿ ನಿಲ್ಲಲಾಗದೆಂದು ಹೊರಟೆ. ಈ ಪ್ರಸ್ತಾಪವನ್ನು ಯಾರಿಗೂ 'ಹೇಳಬಾರದೆ'ಂದು ವಚನವಿತ್ತುದರಿಂದ ಬರೆದಿಡಬೇಕಾಯಿತು. ಇದು ಈಗಿನ ಧರ್ಮಕ್ಕೆ ವಿರೋಧವಾಗಲಾರದಷ್ಟೆ?



# ಅಂಬಲದ ನೆನಪುಗಳು

ನಮ್ಮೂರವರು ಅರವಟ್ಟಿಗೆಗಾಗಿ ಕಟ್ಟಿಸಿದ ಚಾವಡಿಯನ್ನು ಅಂಬಲವೆನ್ನುತ್ತಾರೆ. ಇದು ಒಂದು ರೀತಿಯಿಂದ ಛತ್ರವೆಂದರೂ ಸಲ್ಲುತ್ತದೆ. ಹಿಂದೆ ಹಾಗೆಲ್ಲಾ ಇದ್ದಿರಬೇಕು. ಈಗ ಹಾಗಿಲ್ಲ. ಈಗ ಅಂಬಲವೆಂದರೆ ಯಜಮಾನರು ಮರೆತ ಗೋವುಗಳು ಬಂದು, ರಾತ್ರಿ ಕಳೆಯುವ ಮನೆಯೆಂದರೂ ಸರಿಯೇ. ನಾನೆಷ್ಟೋ ಅಂಬಲ ಕಂಡಿದ್ದೇನೆ. ಅವರಲ್ಲಿ ಒಂದರ ನೆನಪು ಮಾತ್ರ ಬಲು ಚೆನ್ನಾಗಿ ಉಳಿದುದರಿಂದ ಈ ಲೇಖನವನ್ನು ತೊಡಗಿದ್ದೇನೆ. ಅದು ನನ್ನನ್ನು ಸಂಧಿಸಿದುದೂ, ನನ್ನೊಡನೆ ಪ್ರೀತಿಪೂರ್ವಕವಾಗಿ ನುಡಿದುದೂ ಆಶ್ಚರ್ಯವೆಂಬುದರಿಂದಲೇ ಬರೆಯುತ್ತಿದ್ದೇನೆ. ಅದರಿಂದಾಗಿ ನಮ್ಮ ಸಂಸ್ಕೃತಿಯ ಮೈಲಿಕಲ್ಲುಗಳಲ್ಲಿ ಈ ಅಂಬಲವೂ ಒಂದೆಂದು ನನ್ನ ನಂಬಿಕೆ.

ಈಗಿನದು ಮೋಟರುಗಳ ಯುಗ. ವಿಮಾನಯುಗವೆಂದರೂ ಸಲ್ಲುತ್ತದೆ-ಜಗತ್ತಿನ ಪಾಲಿಗೆ. ಹಿಂದುಸ್ಥಾನಕ್ಕೇನೋ ವಿಮಾನ ಬಂದಿದೆಯಾದರೂ ವಿಮಾನಯುಗ ಬಂದಿಲ್ಲ. ಜನರೇ ಹೊಟ್ಟೆಗಿಲ್ಲದೆ, ಹಗುರಾಗಿ ಗಾಳಿಯಲ್ಲಿ ಹಾರುತ್ತಿರುವಾಗ, ವಿಮಾನಗಳಿಗೇಕೆ ತೊಂದರೆ? ಹೋಗಲಿ — ನನ್ನ ಮೆಚ್ಚಿನ ವಾಹನವನ್ನು ಕುರಿತು ಹೇಳುತ್ತೇನೆ. ಅದು ಮೋಟರುಕಾರು ಅಲ್ಲ; ಬಸ್ಸೆಂಬ ಲಾರಿ. ಯಾರಾದರೂ ನನ್ನನ್ನು 'ನೀವು ಹೆಚ್ಚಾಗಿ ಇರುವುದೆಲ್ಲಿ?' ಎಂದು ಕೇಳಿದರೆ—'ಬಸ್ಸಿನ ಮೇಲೆ' ಎನ್ನುವುದು ನನ್ನ ರೂಢಿ. ಅಂಥ ಲಾರಿಯ ಮೇಲೆ ನನಗೆಷ್ಟು ವಿಶ್ವಾಸವಿರಬೇಡ!

ಒಮ್ಮೆ ನಾನು ನನ್ನ ಮೆಚ್ಚಿನ ವಾಹನವನ್ನೇರಿ ದಕ್ಷಿಣ ಕನ್ನಡ

ಡಿಕೆಗಳು ನನ್ನನ್ನು ಮಾನವ ಅವಸ್ಥೆಯಿಂದ ಮೇಲಕ್ಕೆ ಸೆಳೆದುಬಿಟ್ಟಿದ್ದವು. ಹೀಗಾಗಿ ಯಾವ ನೆನಪೂ ಇಲ್ಲದೆ, ನಡೆನಡೆದು ಸಾಗಿ—ಕೊನೆಗೊಂದು ಮೈಲಿಕಲ್ಲಿನೆದುರು ಹೋಗಿ ನಿಂತೆ. ತಿರುಗಿನೋಡಿದೆ. ಎದುರಿಗಿದ್ದ ಮನೆಯೇ ಛತ್ರ-ಎಂದು ತಿಳಿದೆ. ಛತ್ರದ ಅಂಗಳದಲ್ಲಿ ಕುಡಿಕೆ, ಮಡಿಕೆ, ಒಲೆಯ ಕಲ್ಲುಗಳು-ಕುರುಭೂಮಿಯಲ್ಲಿನ ತಲೆ ಓಡುಗಳಂತೆ ಉರುಳಿ ಬಿದ್ದಿದ್ದುವು.

ಛತ್ರವನ್ನು ಸಮೀಪಿಸಿದರೆ, ಚಾವಡಿಯಲ್ಲಿ ದಟ್ಟವಾಗಿ ಧೂಳು ಹಾಸಿದ್ದು ಕಾಣಿಸಿತು. 'ಯಾರಲ್ಲಿ?' ಎಂದು ಕೂಗಿದೆ. 'ಯಾರಿಲ್ಲ' ಎನ್ನುವವರೂ ಇಲ್ಲದಾಯಿತು. ಅದರ ಹಿಂದು ಮುಂದೆ ಅಲೆದಾಡಿದೆ, ಬಾವಿಯೊಂದು ಕಾಣಿಸಿತು. ಬಾವಿಗೆ ಹಗ್ಗವೂ ಇದ್ದಿರಲಿಲ್ಲ; ರಾಟೆಯೂ ಇದ್ದಿರಲಿಲ್ಲ. ಛತ್ರಕ್ಕೂ ಧರ್ಮಾರ್ಥ ಭೋಜನಕ್ಕೂ ಸಂಬಂಧ ಕಲ್ಪಿಸಿಕೊಂಡಿದ್ದ ನನ್ನ ಬ್ರಹ್ಮ ನಿಘಂಟು ಕಕ್ಕಾಬಿಕ್ಕಿಯಾಯಿತು.

ಮಾಡಲು ಬಗೆಯಿಲ್ಲದೆ, ಸಮೀಪ ಹೋಗಿ ಷರ್ಟಿನಿಂದಲೇ ಚಾವಡಿಯನ್ನು ಜಾಡಿಸಿ, ಅಲ್ಲಿ ಆಸೀನನಾದೆ. ಅಲ್ಲಿನ ಒಂದು ಕಂಬಕ್ಕೆ ಒರಗಿಕೊಂಡು ಕುಳಿತೆ. ನನ್ನನ್ನು ಕಡಿದ ಮೊದಲನೆಯ ತಗಣೆಯಿಂದಾಗಿ-ಅಲ್ಲಿ ಒಂದಲ್ಲ ಒಂದು ಕಾಲದಲ್ಲಿ ಮನುಷ್ಯವಾಸ ಇದ್ದಿರಬೇಕೆಂದೆನಿಸಿತು. ಪಾಪ, ನಾನು ನೀರಿಗಾಗಿ ತಪಿಸುತ್ತಿದ್ದಂತೆ ಆ ಬಡಪಾಯಿ ತಗಣೆಗಳು ಅಲ್ಲಿದ್ದುಕೊಂಡು ಮನುಷ್ಯನ ರಕ್ತಕ್ಕಾಗಿ ಯುಗಯುಗಗಳ ತಪಶ್ಚರ್ಯ ಸಾಧಿಸುತ್ತಿದ್ದಿರಬೇಕು. ಅಂತು ಅವುಗಳ ಇಷ್ಟವು ಸಿದ್ಧಿಸಿತು. ನನ್ನ ಗತಿಗೇಡಾಯಿತು.

ಹೊಟ್ಟೆಯ ಸಿಟ್ಟಿಗೆ—"ಯಾವ ಪುಣ್ಯಾತ್ಮನೋ—ಇದನ್ನು ಛತ್ರವೆಂದು ಕರೆದವನು" ಎಂದೆ. "ಹೂಂ" ಎಂದು ಧ್ವನಿ ಮರುಕಳಿಸಿತು. ಮಾಡಿನ ಸಂದಿನಿಂದ ಬಾವಲಿಗಳು ರೆಕ್ಕೆಬಡಿದು ಹಾರಾಡಿದುವು

ಮಾಗ್ಗುಲ ಬಳಿಯ ಮರವೊಂದರಿಂದ ಗೂಬೆ ಘೂಂಕರಿಸಿತು. ಒಮ್ಮೆಗೇ ನನ್ನ ಮನಸ್ಸು ಕಕ್ಕಾಬಿಕ್ಕಿಯಾಗಿ—ಕಣ್ಣೆದುರು ನನ್ನ ಎಳೆತನದಿಂದ ಪ್ರೇರಿತವಾದ ಕೊಲೆ,ಪ್ರೇತ, ಕೀಳು,ಉಂಬಲ್ತಿ, ಬೊಬ್ಬರ್ಯಗಳಂತಹ ಅತಿಮಾನುಷ ಜೀವಿಗಳು ಕುಣಿಯತೊಡಗಿದುವು. ಹೊರಕ್ಕೆ ನೋಡಿದೆ. ಚಂದ್ರನು ಮುಳುಗಿದ್ದ. ಹಾದಿಯೂ ಕಾಣಿಸದಾಗಿತ್ತು. ಆ ಸ್ಥಿತಿಯಲ್ಲಿ ಪ್ರಯಾಣ ಮುಂದುವರಿಸುವ ಮಾತಿಲ್ಲ. ಕಿವಿ, ಕಣ್ಣು, ಬಾಯಿಗಳನ್ನೆಲ್ಲ ಮುಚ್ಚಿಕೊಂಡು ಅಲ್ಲೇ ಮಲಗಿಕೊಳ್ಳುವ ನಿರ್ಧಾರವನ್ನು ಮಾಡಿದೆ. ಯಾಕೋ ನನ್ನಷ್ಟಕ್ಕೆ—"ಮಲಗಿಕೊಂಡರೆ ನಿದ್ರೆ ಬಂದೀತೇ" ಎಂದು ಬಿಟ್ಟೆ! ಆ ಮಾತು ಯಾವನ ಕಿವಿಗೆ ಬಿದ್ದಿತೋ, ತಕ್ಷಣ ಉತ್ತರ ಬಂದಿತು. "ನಾನು ಇಲ್ಲಿ ಮಲಗಿದವ,ಇನ್ನೂ ಎಚ್ಚರವಾಗಿಯೇ ಇದ್ದೇನಲ್ಲ." ನನ್ನ ಧೈರ್ಯವನ್ನೆಲ್ಲ ಗುಡಿಸಿ, ರಾಶಿಮಾಡಿ, ಮುಷ್ಟಿಯಲ್ಲಿರಿಸಿಕೊಂಡು—"ಯಾರಯ್ಯ ನೀನು?" ಎಂದು ಕೇಳಿದೆ.

"ನಾನೇ—ಈ ಅಂಬಲದ ಪಾರೀಸುದಾರ" ಎಂದು ಉತ್ತರ ಬಂದಿತು.

"ಪಾರೀಸುದಾರ? ಯಾರಿಲ್ಲದ ಬದುಕಿಗೆ?" ಎಂದೆ.

"ಇದು ನನ್ನಜ್ಜ ಕಟ್ಟಿಸಿದ ಅಂಬಲ."

"ಇದು ಅಂಬಲವೇ? ಹಾಗಾದರೆ ಛತ್ರವಲ್ಲ."

"ಅದೇ ಇದು."

"ಇಲ್ಲಿ ಊಟ ಹಾಕುತ್ತಾರೆಯೇ..... ಎಂದಾದರೂ ಹಾಕಿದ್ದುಂಟೇ?". ನಕ್ಕು ಉತ್ತರ ಬಂದಿತು "ಇದು ಅನ್ನ ಛತ್ರವಲ್ಲ. ನನ್ನ ಅಜ್ಜ ಬದುಕಿದಷ್ಟು ಕಾಲ ಇಲ್ಲಿ ಯಾರಿಗೂ ಒಲೆ ಹೊತ್ತಿಸಲು ಬಿಡುತ್ತಿರಲಿಲ್ಲ-ನೆಲ, ಗೋಡೆಗಳು ಮಸಿಯಾಗುತ್ತವೆಂದು. ಇಲ್ಲಿ ಬಿಸಿಲಿಗೆ

ತಕ್ಕ ಪ್ರದಕ್ಷಿಣೆ' ಬರತೊಡಗಿದ. ನಮ್ಮಪ್ಪನ ಕಾಲಕ್ಕೆ — ಆತನೂ ತೀರಿಕೊಂಡನು. ಆದರೆ ಯಾವಳೋ ಒಬ್ಬ ಮುದುಕಿ ತಾನಾಗಿಬಂದು, ಇಲ್ಲಿ ನೀರಿನ ಧರ್ಮವನ್ನು ಇರಿಸಿವಳು. ಮುದುಕಿ ಸತ್ತ ವೇಳೆಗೇ ಮೋಟರುಗಳ ಸಂಚಾರ ಮೊದಲಾಯಿತು. ಮುಂದೆ ಇಲ್ಲಿ ನೀರಿಗೆ ಬರುವವರು ಯಾರು?"

"ನೀನು ಕೊಲೆಯಾದೆ ಏಕೆ — ಅದನ್ನು ಹೇಳು."

"ನಮ್ಮಪ್ಪ ಅಜ್ಜನಿಂದ ಬಂದ ಹಣವೆಲ್ಲ ಬರಿದುಮಾಡಿದ. ತಾನಿರುವಷ್ಟು ಕಾಲ ಮೆರೆದಾಡಿದ. ಕೊನೆಗಾಲಕ್ಕೆ ಮಕ್ಕಳು ನಿರ್ಗತಿಕರಾದರೆ ಸಾಲದೆಂದು, ನನಗೊಂದು ಲಗ್ನಮಾಡಿಸಿಯೂ ಸತ್ತ. ಅವನ ಬದುಕು ಹಾಳಾಗಿ, ಹೊಟ್ಟೆಪಾಡಿಗೆ ನಾವು ಊರು ಬಿಟ್ಟು ಅಲೆಯುವಂತಾಯಿತು. ನಮ್ಮ ಅಂಬಲದಲ್ಲೇ ನಾನು ನಾಲ್ಕು ದಿನ ಬಿಡಾರಮಾಡಿದೆ. ಅದರ ಎದುರಿಗೇನೆ ಚಪ್ಪರಕಟ್ಟಿ, ಅಲ್ಲೊಂದು ಕಾಫಿ ಹೋಟೇಲನ್ನಿಟ್ಟೆ. ಕಂಡವರೆಲ್ಲ ನಕ್ಕರು. 'ಅಜ್ಜ ಅರವಟ್ಟಿಗೆಯಿಟ್ಟು ಪುಣ್ಯಕಟ್ಟಿಕೊಂಡ. ಅವನ ಮೊಮ್ಮಗ ಅದರ ಬಾಗಿಲಲ್ಲೇ ನೀರು ಮಾರಿ ಕಾಸು ಮಾಡುತ್ತಿದ್ದಾನೆ" ಎಂದರು.

"ನಾನೇನು ಮಾಡಲಿ ಹೇಳು. ನನಗೆ ಪ್ರಾಯ ಬರುವಾಗ ಅರವಟ್ಟಿಗೆಯಲ್ಲಿ ಜಲದಾನ ನಿಂತಿತ್ತು. ಊರ ಜನರು ಬರಿ ನೀರು ಕುಡಿಯಲು ಬರುತ್ತಿರಲಿಲ್ಲ. ಮೋಟಾರು ವಾಹನಗಳು ಚಲಿಸತೊಡಗಿ ಅಂಬಲ, ಅರವಟ್ಟಿಗೆಗಳಿಗೆ ದಿಕ್ಕಿಲ್ಲವಾಗಿತ್ತು. ಕೊನೆಗೆ ಅಂಬಲವೆಂಬುದು ಊರ ಭಾವಾಜಿಗಳಿಗೆ ಇದೊಂದು ಠಾಣೆಯಾಯಿತು. ಎಲ್ಲ ಭಂಗಿಮುಕ್ಕರೂ ಅಲ್ಲಿ ಬಂದು, ಒಲೆ ಉರಿಸಿ ಗೋಡೆ ಕರಿದುಮಾಡಿದರು. ಅದರದೇ ಮಾಡು ಕಿಟಿಕಿಗಳನ್ನು ಕಿತ್ತು, ಈ ತನಕ ಕಿಡಿಕಾಣದ ನೆಲದಲ್ಲಿ ಒಲೆ ಹೊತ್ತಿಸಿದರು.

"ಕೊನೆಗೆ ಬಾವಾಜಿಗಳ ಬದಲು ಕೊರವಂಜಿಗಳೂ ಬರತೊಡಗಿದರು. ಈ ತಾವನ್ನು ಕಂಡು, ತಮ್ಮ ಡೇರೆ, ಗೂಡಾರ ಬಿಡಿಸಲು ಉದಾಸೀನರಾಗಿ – ಇಲ್ಲೇ ಬೀಡುಬಿಟ್ಟರು. ಈ ಎಲ್ಲಕ್ಕೂ ನಾನು ಸಾಕ್ಷಿಯಾಗಬೇಕಾಯಿತು. ಅವರು ಅಂಬಲದ ಅಂದಗೆಡಿಸುವುದನ್ನು ಕಂಡು ನಾನು ರೇಗಿದೆ. ಬಂದವರು 'ಇದು ನಿನ್ನಪ್ಪನ ಛತ್ರವೋ—ಇಲ್ಲಿ ಅಡುಗೆ ಮಾಡಕೂಡದೆನ್ನಲು' ಎಂದರು. ಆಗ ನನ್ನಪ್ಪನ ಬದುಕೆಂಬುದು ಯಾವುದೂ ಉಳಿದಿರಲಿಲ್ಲ. ನಾನು ಸುಮ್ಮನಾದೆ.

"ಕೊನೆಗೊಂದು ಮಳೆಗಾಲದಲ್ಲಿ ಒಂದು ಕೊರವಂಜಿ ಪಂಗಡದವರು ಅಲ್ಲೇ ಬೀಡುಬಿಟ್ಟರು. ಅವರ ಚಿಳ್ಳೆಪಿಳ್ಳೆಗಳ ಕೂಗು, ಬೇಡಿಕೆಗಳಿಂದ ನನ್ನ ಹೊಟೇಲಿಗೆ ಅವಾಂತರವಾಯಿತು. ನಾನು ರೇಗಿ 'ಇಲ್ಲಿಂದ ನೀವು ಹೊರಟುಹೋಗಿ'ಎಂದೆನು. ಸಮೀಪ ನಿಂತ ನಮ್ಮೂರವನೊಬ್ಬ 'ನಿನಗದರ ಮೇಲೆ ಎಷ್ಟು ಅಧಿಕಾರವಿದೆಯೋ ಅವರಿಗೂ ಅಷ್ಟೇ ಇದೆ' ಅಂದನು. ನನಗೆ ಕೋಪ ಕೆಂಪಡರಿತು. ಆದರೆ ಬಡವನ ಕೋಪ!

"ಮುಂದೆ ಅದು ಅವರದೇ ಮನೆಯಾಯಿತು. ನಾನು ಅಂಬಲದಲ್ಲಿ ಮನೆಮಾಡಿಕೊಳ್ಳಲು ಹಿಂಜರಿದರೂ,ಯಾವ ಸಂಬಂಧವೂ ಇಲ್ಲದ ಅವರು ಅದು ತಮ್ಮದೆಂದುಕೊಂಡರು. ಅದು ಹಗಲಿಗೆ ಕಣಿ ಹೇಳುವವರ ಮನೆಯಾಯಿತು. ರಾತ್ರಿ ಊರಿನ ಸೂಳೆಗೇರಿ, ಜೂಜಿನ ಕಟ್ಟೆಯೆನಿಸಿತು. ಅದರ ಬಿಡಿಸಿದ ಚಾವಡಿಗೆ ತಟ್ಟಿಕಟ್ಟಿ,ಮರೆಮಾಡಿ,ಅದನ್ನು ತಮ್ಮ ಗುಡಿಸಲನ್ನಾಗಿ ಮಾಡಿಕೊಂಡರು."

"ಅಯ್ಯೋ ಪಾಪವೇ" – ಎಂದು ಮರುಕಗೊಂಡೆ ನಾನು.

"ಪಾಪ ಅಲ್ಲಿಗೂ ಮುಗಿಯಲಿಲ್ಲ. ನನ್ನ ಸ್ವಂತ ಸಂಸಾರ ಕೆಟ್ಟಿತು. ನನ್ನ ಹೆಂಡತಿಯು ಕಾಯಿಲೆಯಿಂದ ಚಿಕಿತ್ಸೆಯಿಲ್ಲದೆ ಮಡಿದಳು. ನನ್ನ

ಹೊಟೇಲು ಅನಾಥವಾಯಿತು. ನನಗೆ ಜೂಜಿನ ಭ್ರಮೆಯುಂಟಾಗಿ ಊರವರ ಜೊತೆಗೆ ನಾನು ರಾತ್ರಿಕಾಲ ಅಂಬಲಕ್ಕೆ ಬರತೊಡಗಿದೆ. ಜೂಜಿಂದ ಧನಿಕನಾಗಲು ಬಯಸಿದೆ."

"ಹಾಗೇಕಾಯಿತು?"

"ಏನಾಯಿತೋ, ಏಕಾಯಿತೋ—ಅಂತು ಆಯಿತು. ಅಂತು ಜುಗಾರಿಯಲ್ಲಿ ನಾನು ನಿಪುಣನಾದೆ. ಒಂದು ದಿನ ನನ್ನ ನೈಪುಣ್ಯವೇ ನನಗೆ ಮೃತ್ಯುವಾಯಿತು. ನನಗೊಂದು ರಾತ್ರಿ ನೂರು ರೂಪಾಯಿಗಳ ಲಾಭವಾಯಿತು. ದುರ್ದೈವಕ್ಕೆ ನಾನು ಆ ರಾತ್ರಿಯನ್ನು ಅಲ್ಲಿಯೇ ಕಳೆದೆ. ಹಣ ಕಳೆದುಕೊಂಡವರು, ನನ್ನನ್ನು ಕತ್ತು ಹಿಚುಕಿ, ಕೊಂದು, ಹಗ್ಗ ಕಟ್ಟಿ ಬಾವಿಗೆಸೆದರು. ಅಂದಿನಿಂದ ಈ ತಾವು ನಿರ್ಜನವಾಯಿತು. ಆ ಬಾವಿಯ ನೀರು ನನ್ನೊಬ್ಬನಿಗಲ್ಲದೆ ಬೇರೆಯವರಿಗ ಸಲ್ಲದಾಯಿತು.

"ನನಗೆ ನನ್ನ ಬಾಳಿನ ಗೋಳನ್ನು ಬಂದವರೊಡನೆ ಹೇಳಿಕೊಳ್ಳುವ ಆಸೆ. ಆದರೆ ಬಂದವರೊಡನೆ ಬಾಯಿ ತೆರೆಯುವೆನೆಂದರೆ, ಇಲ್ಲಿಗೆ ಬರುವವರೇ ಇಲ್ಲ. ಈ ತಾವಿನಲ್ಲಿ ತಂಗಲು, ಗಾಡಿಕಾರರೂ ಅಂಜುತ್ತಾರೆ."

ಕೊಲೆಯು ತನ್ನ ಕತೆಯನ್ನು ಹೇಳಿ ಮುಗಿಸುವಾಗ ನನ್ನ ಮೈ, ಬೆವರಿಂದ ತೊಯ್ದು ಹೋಗಿತ್ತು. ಎಲ್ಲೆಡೆಯಿಂದಲೂ ಕಂಬನಿ ಸುರಿಯುವಂತೆ ಕಾಣಿಸುತ್ತಿತ್ತು. ಬೇಸಗೆಯ ಅಪೂರ್ವ ಮಳೆಯೊಂದು ಬಾನಿಂದ ಆಗ ನಿಜಕ್ಕೂ ತೊಟ್ಟಿಕ್ಕುತ್ತಿತ್ತು. ನನಗೆ ದಿಗ್ಭ್ರಮೆಯಾಗಿತ್ತು.

ಆ ಗಳಿಗೆಗೆ ನನ್ನ ಸುದೈವದಿಂದ, ಘರ್ಜನೆ ಮಾಡುತ್ತ ನಮ್ಮ ಬಸ್ಸು ಬಂದಿತು. ಚಂಗನೆ ಓಡಿಹೋಗಿ ಅದನ್ನು ನಿಲ್ಲಿಸಿದೆ. ಅವರೂ ನನಗಾಗಿ ಆತುರರಾಗಿದ್ದರು. ನಾನು ಸೇರಬೇಕಿದ್ದ ಛತ್ರವೂ ಹಿಂದೆ ಉಳಿದಿತ್ತಂತೆ. ನಾನು ಮೂರು ಮೈಲಿನ ಬದಲು ಮೂರು ಹರದಾರಿ

ನಡೆದು ಬಹು ಮುಂದಕ್ಕೆ ಬಂದಿದ್ದೆನಂತೆ.

ಅಂತು ಬಸ್ಸನ್ನು ಏರಿದೊಡನೆ ನನಗೆ ಪುನರ್ಜೀವ ಪ್ರಾಪ್ತಿಸಿತು. ಆದರೆ ಅದು ಆ ಡ್ರಾಯುವರನಿಗೆ ಸಹಿಸಬೇಡವೆ? ಅವನು ಊರು ಸೇರುವ ತನಕ, ನಾರಾಯಣಯ್ಯನ ಅಂಬಲದ ವಿಚಾರವಾಗಿ, ತಾನು ಕೇಳಿದ ಕತೆಗಳನ್ನೆಲ್ಲ ಬಣ್ಣಿಸಿದನು. ಅಲ್ಲಿನ ಕೊಲೆಯು ನೂರೆಂಟು ಮಂದಿಯ ಕೊರಳನ್ನು ಅಮುಕಿ ಹಿಡಿದು ತನ್ನ ಸೇಡು ಸಾಧಿಸಿತ್ತೆಂದೂ "ನೀವೇಕೆ ಅಲ್ಲಿಗೆ ಹೋದಿರಪ್ಪ, ನಿಮ್ಮ ಅದೃಷ್ಟ ಚೆನ್ನಾಗಿತ್ತೆಂದೇ ಉಳಿದುಕೊಂಡಿರೆಂದೂ" ಹೇಳಿದ.

ಮುಂದೆ ನಾವು ಬಸ್ಸನ್ನೇರಿ ನಗರವನ್ನು ಸೇರಿಯಾಯಿತು. ಹಲವು ಬಾರಿ, ಇನ್ನಾರಾದರೂ ಧೈರ್ಯವಂತರನ್ನು ಕಟ್ಟಿಕೊಂಡು ಆ ಕೊಲೆಯ ಇತಿಹಾಸ ಕೇಳಬೇಕೆಂಬ ಸಾಹಸ ನನಗೆ. ಆದರೆ ಆ ದಾರಿ ದಾಟುವಾಗಲೆಲ್ಲ "ಎಲ್ಲವೂ ಹುಚ್ಚು ಕತೆ! ನನ್ನ ಭ್ರಮೆ! ಇತರ ಅಂಬಲಗಳಿಗೂ ಇದಕ್ಕೂ ಏನು ಅಂತರ? ಅವುಗಳ ಹಂಚು ಕಳಚಿಬಿದ್ದು ಹಾಳಾಗುತ್ತಿದ್ದರೆ, ಇದರ ಗೋಡೆಯೇ ಅಳಿದು ಬೀಳುತ್ತಿರಬಹುದು" ಅನ್ನುತ್ತಿದ್ದೆ. ಇನ್ನೊಮ್ಮೆ ಎಂದಾವರೂ ನಮ್ಮ ಬಸ್ಸಿನ ಟಾಯರು ಒಡೆದು ರಾತ್ರಿಯಲ್ಲಿ ನನ್ನನ್ನು ಅಲ್ಲಿ ಕೆಡೆಯುತ್ತಿದ್ದರೆ ಮಾತ್ರ ಏನು ತಿಳಿಯುತ್ತೇನೋ— ಅದನ್ನು ಮಾತ್ರ ಹೇಳಲಾರೆ.



# ಗುಡಿಯಿಲ್ಲದ ಮಹಾಲಿಂಗ

ಸುಳ್ಯದ ಬಳಿಯ ಕಗ್ಗಾಡಿನಲ್ಲೊಂದು ದಿನ ಭೇಟಿಯಾದ ಮಹಾಲಿಂಗನ ಕಥೆಯಿದು. ಪಯಸ್ವಿನೀ ನದಿಯ ತೀರ. ನಾವು ಕೆಲವರು ಆಲಟ್ಟಿಗೆ ಹೋಗುತ್ತಿದ್ದೆವು. ನದಿಯಾಚೆಗಿನ ದಟ್ಟ ಕಾಡಿನಲ್ಲಿ ಆ ಮಹಾಲಿಂಗನ ಗುಡಿ ಇದೆ. ಗುಡಿ ಈಗ — ಸುತ್ತಲಿನ ಪ್ರದೇಶದೊಂದಿಗೆ ಬೆರೆತಿದೆ. ಮಹಾಲಿಂಗನೊಬ್ಬನು, ಅರೆ ಕೆಸರು ಕೊಳಚೆಗಳಲ್ಲಿ ನಿಂತು ರೋದಿಸುತ್ತಿದ್ದಾನೆ. ಅಂತಹ ಹಲವು ಮಹಾಲಿಂಗರು ನಮ್ಮ ಜಿಲ್ಲೆಯ ನೂರಾರು ಮೂಲೆಗಳಲ್ಲಿರಬಹುದು. ಎಷ್ಟೋ ಮಹಾಲಿಂಗರು, ಇದೇ ರೀತಿ ನನ್ನೊಡನೆ ಮಾತನಾಡಿದುದರಿಂದ, ಈ ಮಹಾಲಿಂಗನ ವಿಚಾರ ಮಾದರಿಗಾಗಿ ಬರೆಯುತ್ತಿದ್ದೇನೆ.

ನಾವು ಕೆಲವರು ನದಿಯನ್ನು ದಾಟಿದೆವು. ಕಲ್ಲು ಬಂಡೆಗಳ ಮೇಲೆ ಮೊಸರು ಕಡೆಯುವಂತೆ, ತನ್ನನ್ನು ತಾನು ಕಡೆದುಕೊಂಡು ಪಯಸ್ವಿನಿ ಹರಿಯುತ್ತಿದ್ದಳು. ಪಯಸ್ವಿನಿ ತಪಸ್ವಿನಿಯು; ಅಹುದೋ ಅಲ್ಲವೋ — ಕಾಡಿನೆಡೆಯಲ್ಲಿ ಅವಳ ವಾಸ. ಪಯಸ್ವಿನಿಯ ನೀರನ್ನು ಕುಡಿದೆವು.ಉಂಡಮನೆಗೆರಡೆಣಿಸಿ-ನೀರನ್ನುಕುಡಿದು ಅವಳ ಮೋರೆಯ ಮೇಲೆ ಉಗುಳಿ, ಮುಂದಕ್ಕೂ ಸಾಗಿದೆವು. ತುಸು ದೂರ ಸರಿದಿದ್ದೆವಷ್ಟೆ — ದರಿದ್ರ ಮರಗಪ್ಪೆಯೊಂದು ಕಿರುಚಿತು.

ನಾನು — ಎಲಾ, ಚಿರಿ ಚಿರಿ ಚೀರುವವರು ಯಾರು, ಇಸ್ಕೂಲು ಮಾಸ್ತರರ ಹಾಗೆ! ಯಾರು ಇದರ ಲೆಕ್ಚರನ್ನು ಕೇಳುವವರಂತೆ!

ನನ್ನ ಜತೆಯಲ್ಲಿದ್ದ ಒಬ್ಬರು ಮಾಸ್ತರರು — (ಸಿಟ್ಟಾದರೋ ಏನೋ) ಅದು ಮರ ಕಪ್ಪೆಯಲ್ಲವೇ — ಎಂದರು.

ನಾನು-ಕಪ್ಪೆಯೆಂದರೆ ಬ್ರಾಹ್ಮಣನಂತೆ. ನಾವು ಚಿಕ್ಕವರಿದ್ದಾಗ ನಮ್ಮಮ್ಮ ಹಾಗೆ ಹೇಳುತ್ತಿದ್ದ ನೆನಪು. ಅದನ್ನು ಕೊಂದರೆ ವಿಪ್ರರನ್ನು ಕೊಂದಷ್ಟು ಪಾಪ ಎನ್ನುತ್ತಿದ್ದಳು. ಮುಂಗಾರು ಮಳೆಗೆ ನಮ್ಮೂರ ಗದ್ದೆಗಳ ಅಂಚಿನಲ್ಲಿ, ಅವು ಸಾಲಾಗಿ ಕುಳಿತು ಟ್ರೊಂಯಿಗುಟ್ಟುವುದನ್ನು ನಾನು ಕಂಡವನು. ಬ್ರಾಹ್ಮಣರು ರುದ್ರದ ವೇಳೆಯಲ್ಲಿ ಅದೇ ರೀತಿ ವೇದದ ಋಕ್ಕು ಹೇಳುವುದನ್ನು ಕೇಳಿರುವೆ. ಹೀಗಿರಲು ಅದನ್ನು ಬ್ರಾಹ್ಮಣ ಜಾತಿಗೆ ಸೇರಿಸಿದ್ದು ತಪ್ಪಲ್ಲ. ಆದರೆ— ಕಪ್ಪೆಗೆ ಮರವೇರುವ ಕೆಲಸವೇಕೆ? ಬಿಲ್ಲವರ ಕೆಲಸ ಬ್ರಾಹ್ಮಣರಿಗೇಕೆ?

ಮಾಸ್ತರರು— ಛೇ, ಅದು ಇರುವುದು ಹೆಚ್ಚಾಗಿ ಮರಗಳ ಮೇಲೆಯೇ. ಮರದಿಂದ ಮರಕ್ಕೆ ಹಾರುವುದೂ ಉಂಟು.

ನಾನು— ಹಾಂ, ಈ ಜಾತಿಯ ಕಪ್ಪೆಗಳನ್ನು ಕಂಡೇ ಬ್ರಾಹ್ಮಣನನ್ನು 'ಹಾರುವ' ಎಂದಿರಬೇಕು. ಇರಲಿ, ನೋಡಿಬಿಡುವ— ಹಾರುವನ ರೂಪವನ್ನಾದರೂ.

ಮಾಸ್ತರರು-ಪಷ್ಟ ಆಯಿತು, ಕಪ್ಪೆಯನ್ನು ನೋಡಲಿಕ್ಕೆ ನಿಂತರೆ, ಹೊತ್ತು ಮುಳುಗೀತು ನಾವು ಆಲಟ್ಟಿಯನ್ನು ಮುಟ್ಟುವಾಗ.

ನಾನು— ಅಲ್ಲ, ಆ ಕಪ್ಪೆ ಏನು ಮಂತ್ರ ಹೇಳುತ್ತಿದೆ— ರುದ್ರದ ಬ್ರಾಹ್ಮಣರ ಹಾಗೆ?

ಹೀಗೆಂದು ಭಾರೀ ಪತ್ತೇದಾರನಂತೆ, ಅದರ ನಿನಾದವು ಪೂರಮಾಡುತ್ತಿದ್ದ ಸ್ಥಳಕ್ಕೆ ಬಿಜಯಂಗೈದೆ. ನೋಡುವಲ್ಲಿ ಸದರಿ ಕಪ್ಪೆಯಿತ್ತು.ಒಂದು ಕಲ್ಲಿನ ಮೇಲೆ ಕುಳಿತು ಅದು ಟ್ರೊಂಯ್ ಗುಟ್ಟುತ್ತಿತ್ತು.

ನಾನು— ಬ್ರಾಹ್ಮಣರು ಶಿವಲಿಂಗದ ಮುಂದಕ್ಕೆ ಕುಳಿತು ರುದ್ರ ಹೇಳಿದರೆ, ಇದು ಲಿಂಗದ ತಲೆಯ ಮೇಲೆಯೇ ಕುಳಿತು ಹೇಳುತ್ತಿದೆ.

ಆ ಕಪ್ಪೆಗೆ ಅವಮಾನವಾಯಿತೋ ಏನೋ—ಅದು ಅಲ್ಲಿಂದ ಓಡಿ ಹೋಯಿತು.

ಮಾಸ್ತರರು—ಅಲ್ಲ,ಅದು ನಿಜಕ್ಕೂ ಶಿವಲಿಂಗವೇ? ಈ ಗುಡಿಯ ಹೆಸರೇನು? ನೋಡಿ, ಅದರ ಪಾಣಿಪೀಠ, ಗುಡಿಕಲ್ಲು, ಎಲ್ಲಾ ಚೆದರಿ ಬಿದ್ದುದನ್ನು ನೋಡಿ.

ಅಲ್ಲಿ ಹಾಳು ಗುಡಿಯೊಂದರ ಭಗ್ನಾವಶೇಷಗಳು ಕಾಣಿಸುತ್ತಿದ್ದುವು. ಮಹಾಲಿಂಗನು ಕುಳಿತಿದ್ದಾನೆ; ಗುಡಿಗೆ ಮಾಡು ಗೋಡೆಗಳೆರಡೂ ಇದ್ದಿರಲಿಲ್ಲ. ಅದರಿಂದ ನನ್ನ ಮನಸ್ಸಿನಲ್ಲಿ ಏನೇನೋ ವಿಚಾರಗಳು ಸುಳಿದುವು.

ನಾನು—ಅಪ್ಪಾ, ಲಿಂಗಾ, ಯಾಕೆ ಈ ಜನರು ನಿನ್ನನ್ನು ಅಟ್ಟಕ್ಕೇರಿಸಿ, ಮಹಾಲಿಂಗನನ್ನಾಗಿ ಮಾಡಬೇಕಿತ್ತು? ಈಗ ಹೀಗೆ ನಿನ್ನ ಕೈಬಿಟ್ಟು........

ಮಹಾಲಿಂಗ—ನೀನಾರಯ್ಯ ಹೀಗೆ ಬಲು ಕರುಣೆಯಿಂದ....

ನಾನು—ನಾನೆಂದರೆ ನಿನ್ನ ಹೆಸರಿನವನೇ! ಶಿವರಾಮ ಅಂತ. 'ಶಿವ'ನ ಸಿಟ್ಟು ಹೆಚ್ಚಾದೀತು ಎಂಬುದರಿಂದ ಪೆಚ್ಚ'ರಾಮ'ನನ್ನು ಜೊತೆಗೆ ದೋಸ್ತಿಮಾಡಿಸಿ ಬಿಟ್ಟಿದ್ದಾರೆ. ಅದನ್ನು ಬಿಡು—ನಿನ್ನ ಅವಸ್ಥೆಯೇನು? ನಮ್ಮೂರಲ್ಲಿ ಒಬ್ಬ ಮಹಾಲಿಂಗನಿದ್ದಾನೆ. ಏನು ಅವನ ಠೀವಿ! ಅವನು ಆಳೆತ್ತರದ ಅಸಾಮಿ. ಅವನಿಗೆ ದಿನಕ್ಕೆರಡು ಸಾರಿ ಅಭಿಷೇಕ(ಬರಿಯ ನೀರಲ್ಲ); ಮಳೆ ದಿನವೂ ಸಹ. ಗೋಕರ್ಣದಲ್ಲಿದ್ದಾನೆ ಒಬ್ಬ; ಅವನ ವೈಭವವನ್ನಂತು ಹೇಳತೀರದು.

ಮಹಾ—ಅದೇನು ವೈಭವವೋ ಅವರದ್ದು! ಅವರಿಗಿಂತ ನನ್ನ ಹಾಗೆ ಇರುವುದು ಎಷ್ಟೋ ಲೇಸು.

ನಾನು—ಬಾಲಹೋದ ನರಿಯ ಕಥೆಯಂತೆ.

ಮಹಾ — ಅಲ್ಲವಯ್ಯ, ನಿನಗೆ ನನ್ನದೇ ಹೆಸರಿದೆ ಎಂದು ಹೇಳುತ್ತಿದ್ದೇನೆ. ಇಲ್ಲಿ ಪೀಠದ ಮೇಲೆ ಕುಳಿತು ನಾನು ಯಾವ ಅನ್ಯಾಯಕ್ಕೆಲ್ಲ ಸಾಕ್ಷಿಯಾಗಬೇಕಿತ್ತು ಬಲ್ಲೆಯಾ?

ನಾನು-ಅನ್ಯಾಯವೆಲ್ಲಿ! ಜನರು, ತಮ್ಮಲ್ಲಿ ಭಕ್ತಿ ಇರಲಿ, ಇಲ್ಲದಿರಲಿ, — ನಿನಗಾಗಿ ಏಕಾದಶ ರುದ್ರ ಮಾಡುತ್ತಾರೆ. ಅದರಅರ್ಥ ಅವರಿಗೇ ತಿಳಿಯದು. ಅರ್ಥಮಾಡಬಯಸುವುದೂ ಇಲ್ಲ. ನಮ್ಮಲ್ಲೇನಾದರೂ ಮಹಾಸಭೆಯಾದರೆ ಅಧ್ಯಕ್ಷ ಅನ್ನುವ ಅಸಾಮಿಯು ಗದ್ದುಗೆಯನ್ನೇರಿ ಕುಳಿತರೆ, ನಾಲ್ಕು ತಾಸು ಅಳುವುದುಂಟಲ್ಲ. ನಾಲಿಗೆ ಚಾಪಲ್ಯವಿರುವ ಅಸಾಮಿಗಳು ಕಿರುಚಿದ್ದೆಲ್ಲಾ ಚೆನ್ನಾಗಿದೆ ಎಂದು ಅನುಭವಿಸಬೇಕು. ಇಲ್ಲಿ ಹಾಗೆ ಬಂದು ಯಾರೂ ಒದರುವುದಿಲ್ಲವಲ್ಲ. ಒದರುವ ಭಾಷೆಯೂ ಸಂಸ್ಕೃತ — ಅದು ನಿನಗೆ ತಿಳಿದಿರಬೇಕು. ನಿತ್ಯವೂ ನಿನ್ನ ಸ್ತುತಿಯೇ.

ಮಹಾ — ಬೆಂಕಿ ಬಿತ್ತು ಆ ಸ್ತುತಿಗೆ! ಬಾಯಿಪಾಠಮಾಡಿ ಮೇಲಿಂದ ಮೇಲೆ ಅದನ್ನೇ ಹೇಳುತ್ತಾ ಇದ್ದರೆ, ಕೇಳಲು ಬೇಸರಬಾರದೇ? ಕಿವಿ ಒಡೆದುಹೋಗಲಿ ಅನಿಸುತ್ತದೆ.

ನಾನು — ಅನಿಸುತ್ತದೆ. ಅನಿಸಿದರೆ ನಷ್ಟವೇನು? ಪೂಜೆ, ಹೂವು, ಹಾರ, ಗಂಧ, ಇತ್ಯಾದಿ ಎಲ್ಲವೂ ಬಹುವಾಗಿ ಸಿಗುವಾಗ.

ಮಹಾ— ಅಯ್ಯೋ ಬೇಡಪ್ಪ ಆ ವಿಷಯ; ಬಿಡು. ಕರುಳು ಕತ್ತರಿಸುತ್ತದೆ ನೆನೆದುಕೊಂಡರೆ.

ನಾನು— ಕರುಳನ್ನು ಕಿತ್ತುಹಾಕಿಬಿಡು. ಕಶ್ಮಲ ಹೊರುವ ಕರುಳಿದ್ದರೆ ಹೊಟ್ಟೆಗೆ ಶೂಲೆಯಲ್ಲವೇ?

ಮಹಾ— ಮಾತು ಸರಿಯೇ. ಆದರೆ ಹಲವರ ವೈಭವ, ನನ್ನ ಹೀನಾವಸ್ಥೆಗಳನ್ನು ಕುರಿತು ಹೇಳುತ್ತೀಯಲ್ಲ!

ನಾನು — ಗೋಕರ್ಣೇಶ್ವರನ ವೈಭವ — ಎಂದು ಹೇಳಿದೆ.

ಮಹಾ-ನಿಜ. ಅದೇನೆ ನನಗೆ ಬೇಡ ಎಂದೆ. ನೂರು ಜಪಗಳನ್ನು ಮಾಡುತ್ತೇನೆ ಎಂದು ಪೂಜಾರಿ ನನ್ನೆದುರಿಗೆ ಮಾತುಕೊಡುತ್ತಾನೆ. ಹತ್ತುಸಹ ಜಪಮಾಡುವುದಿಲ್ಲ. ನೈವೇದ್ಯಕ್ಕೆ ಆರುಪಾವು ಅಕ್ಕಿಕೊಂಡು, ಎರಡು ಪಾವು ನೆನಸಿ, ಒಂದು ಪಾವು ತೋರಿಸಿ ಮನೆಗೆ ಒಯ್ಯುತ್ತಾನೆ. ಅಯ್ಯೋ-ಅಯ್ಯೋ, ಮಹಾಲಿಂಗ ಭಟ್ಟನೆಂದೇ ನನ್ನ ಹೆಸರಿನ ಅರ್ಚಕ ನಿದ್ದ. ನನ್ನ ಮುಂದಿನ ನಂದಾ ದೀಪವನ್ನು ರಾತ್ರಿ ಗುಡಿಮುಚ್ಚುವಾಗ ತಾನೇ ನಂದಿಸಿ ಬೆಳಿಗ್ಗೆ ಬಂದಾಗ ತಿರುಗಿ ಹಚ್ಚಿಬಿಡುತ್ತಿದ್ದ.

ನಾನು-ಪೂಜಾರಿಯ ಮಾತನ್ನು ಬಿಡು. ಅವನಿಗೂ ಪೂಜೆಯನ್ನು ಮಾಡಿ ಬೇಸರ ಬರಲಾರದೇ? ಸರಕಾರಿ ಗುಮಾಸ್ತಿಕೆಯಂತೆ ಅವನು ಗೀಚಿದ್ದೇ ಗೀಚುವುದಲ್ಲವೇ? ಆದರೆ ಬರುವ ಭಕ್ತರಿಗಾಗಿ ನಿನ್ನ ಮೇಲೆ ಪ್ರೀತಿಯಿತ್ತೋ ಇಲ್ಲವೋ?

ಮಹಾ—ಎಲ್ಲಾ ಪ್ರೀತಿಯುದ್ದವರೇ!

ನಾನು—ಹಾಗೆ ಹೇಳು ಮತ್ತೆ.

ಮಹಾ-ಹೇಳುವುದೇನು ನನ್ನ ಗೋಳನ್ನು? ಬಂದು ಬಂದವರು ನನ್ನಲ್ಲಿ ಫಿರ್ಯಾದಿಕೊಡುವವರೆ ವಿನಾ ಮತ್ತೇನಿಲ್ಲ. ಒಬ್ಬಾಕೆ ಬಂದಳು-ತನಗೆ ಮಕ್ಕಳಿಲ್ಲ ಎಂದು ಅತ್ತಳು. ಇನ್ನೊಬ್ಬನಿಗೆ ಸಾಲವಿದೆಯಂತೆ, 'ತೀರಿಸಯ್ಯ' ಎಂದು ಅತ್ತ. ಮೂರನೆಯವನು ಎಲ್ಲವನ್ನು ಬಿಟ್ಟು-ತನ್ನ ಕೋಣಕ್ಕೆ ಕಂಬಳದಲ್ಲಿ ಗೆಲುವಾಗಲಿ ಎಂದು ಕೇಳಿಕೊಂಡ

ನಾನು—ಕೋಣವೇ, ನಂದಿಯೇ?

ಮಹಾ—ನನ್ನ ನಂದಿಯೇ? ನೋಡಲ್ಲಿ ಎಂಟು ಚೂರಾಗಿ ಬಿದ್ದಿದೆ.

ನಾನು—ಯಾರು? ಘಜನಿ ಮಹಮ್ಮದ ಬಂದಿದ್ದನೇ ಇಲ್ಲಿಗೆ!

ಮಹಾ—ಘಜನಿ ಯಾಕೆ? ಆ ಮಹಾಲಿಂಗ ಭಟ್ಟನ ತಮ್ಮನೊಬ್ಬನಿದ್ದ-ಇದು ಅವನ ಕೆಲಸ. ಎತ್ತಿ ಕಸರತ್ತು ಮಾಡಿ, ನಂದಿಯನ್ನು

ಕೆಡವಿ ಚೂರುಮಾಡಿದ. ಊರಲ್ಲಿ ಬೊಬ್ಬೆ ಬಿತ್ತು–ನಂದಿ ಚೂರಾ ಯಿತು, ಊರು ಸುಡುತ್ತದೆ-ಎಂದು. ಭಟ್ಟನ ತಮ್ಮನ ಮೇಲೆ ಜನಕ್ಕೆ ಸಂಶಯ ಬಂದಿತು. ಅವನೇನು! ಧೀರ! ನನ್ನ ಮುಂದೆಯೇ ಆಣೆಮಾಡಿ ಹೇಳಿಬಿಟ್ಟ: 'ನಾನು ಆ ದಿನ ಗುಡಿಗೇನೇ ಬಂದವನಲ್ಲ' ಎಂದು.

ನಾನು – ನಂದಿಯ ವಿಚಾರ ಹಾಗೇನು? ಇನ್ನು ನಿನ್ನ ಪಾರ್ವತಿ, ಮಗ ಗಣೇಶ; ಶೃಂಗಿ ಭೃಂಗಿ ಮೊದಲಾದ ಪರಿವಾರಗಳೆಲ್ಲ ಎಲ್ಲಿ?

ಮಹಾ – ಎಂಥವನು ನೀನು! ನನ್ನ ಅವಸ್ಥೆ ಹೀಗಾಗಿರುವಾಗ ಬಂಗಾರದ ಪಾರ್ವತಿಯನ್ನು . . . . .

ನಾನು – ಪಾರ್ವತಿಯೆಂಬವಳು ಚಿನ್ನಕ್ಕೆ ಸಮ.

ಮಹಾ – ಅವಳನ್ನು ಮಾಡಿದ್ದು ಚಿನ್ನದಿಂದ ಎಂದೆ. ಇನ್ನೊಬ್ಬ ಪೂಜಾರಿ,ಇಲ್ಲಿನ ಮಾಲೆಯವರ ಜೊತೆಗೆ ಸೇರಿ ನನ್ನ ಪಾರ್ವತಿಯನ್ನು ಎತ್ತಿಕೊಂಡು ಹೋಗಿ, ರಾತ್ರಿಯಲ್ಲಿಯೆ ಕರಗಿಸಿ ಬಿಟ್ಟ!

ನಾನು – ಪತ್ನಿಯನ್ನಗಲಿದ ಮೇಲೆ ನಿನ್ನ ಗತಿ?

ಮಹಾ–ಅಗಲುವುದೆಲ್ಲಿ ಬಂತು? ಮುನ್ನೂರು ವರ್ಷದ ಕೆಳಗೆ ನನ್ನನ್ನು ಸ್ಥಾಪನೆಮಾಡಿದಾಗಿದ್ದ ಆ ವೈಭವವೇನು? ಪಾರ್ವತಿಯನ್ನೂ, ನನ್ನನ್ನೂ ಜತೆಯಲ್ಲಿ ಕುಳ್ಳಿರಿಸಿ ಲಗ್ನಮಾಡಿಸಿ, ಕೋಣೆಯಲ್ಲಿ ಹಾಕಿ!..

ಈ 'ಪಬ್ಲಿಕ್ ಫಂಕ್ಷನ್' ವಿಚಾರ ಹೇಳುತ್ತ ಅವನಿಗೆ ನಾಚಿಕೆ ಯಾಗಿ ಕಣ್ಣೀರೂ ಬಂದಿತು.

ನಾನು–ಹೋಗಲಿ ಬಿಡು ಆ ವಿಚಾರವನ್ನು. ಅವರಿಗೇನು-ದಾಂಪತ್ಯ ಏಕಾಂತದ ವಿಚಾರ; ಪಬ್ಲಿಕ್ ಆಗಕೂಡದು ಎಂತ ತಿಳಿದಿದೆಯೇ? ಶುದ್ಧ ಪಶುಬುದ್ಧಿಯವರು.

ಮಹಾ – ಅವರಿಗದು ಅನ್ಯಾಯವಾಗಿ ಕಾಣಿಸಲಿಲ್ಲ; ನನ್ನನ್ನು ಪಶುಪತಿ ಎಂದೂ ಕರೆದರು.

ನಾನು — ಏನು, ಆಗಿನವರೂ ಅಷ್ಟು ಲಜ್ಜಾಭಂಡರೇ?

ಮಹಾ — ಏನೋ, ನನ್ನ ಪ್ರಥಮದ ಪೂಜಾರಿ, ಮತ್ತು ಆಗಿದ್ದ ದೇವದಾಸಿ ಅವರು ನಿತ್ಯವೂ ನನ್ನ ಗುಡಿಯಲ್ಲಿ........

ನಾನು—ಹೋಗಲಿ ಬಿಡು. ಯಾವುದೂ ನಿನಗೆ ತಿಳಿಯದೆ ಹೋಗುವ ಹಾಗಿಲ್ಲ. ಅಂಥ ನಿನ್ನನ್ನು ಅಂತರಂಗಕ್ಕೆ ಒಯ್ಯೋಣ ಎಂದು ತಿಳಿದಿರಬೇಕು. ಅವರು ಸತ್ತರಲ್ಲ ಈಗ. ನಿನ್ನ ವಿನಾಯಕ?

ಮಹಾ — ಓಹೋ, ಮಗ ವಿನಾಯಕನೆ? ಆಗ ಅವನಿಗೆ ಸಾವಿರ ತೆಂಗಿನ ಕಾಯಿಗಳ ಮೂಡುಗಣಪತಿ ಹರಕೆ ಬರುತ್ತಿತ್ತು.

ನಾನು — ಈ ಕೊಬ್ಬರಿಯನ್ನೆಲ್ಲ ತಿನ್ನಲು ನಿನ್ನ ಮಗನಿಗೆ ಹೇಗೆ ಸಾಧ್ಯವಾಯಿತು? ಒಂದೆ ನಿನ್ನ ಕೈಲಾಸದಲ್ಲೂ ತೆಂಗಿನ ತೋಟವಿದ್ದಿತ್ತೇ?

ಮಹಾ — ಮಗ ಕೊಬ್ಬರಿ ಎಲ್ಲಿ ತಿನ್ನುತಿದ್ದ? ಕೊಬ್ಬರಿ ಅವರಿಗೆ. 'ರಪ್ ರಪ್' ಎಂದು ಹೊಸ್ತಿಲಿಗೆ ಕಾಯಿ ಒಡೆದು, ಗದ್ದಲ ಮಾಡುತ್ತಿದ್ದರು. ಆ ಮೇಲೆ ಚಿಪ್ಪನ್ನು ಅಲ್ಲಿಯೇ ಎಸೆಯುತ್ತಿದರು — ಇನ್ನೊಬ್ಬನ ಕಾಲಿಗೆ ತಾಗಿ ರಕ್ತ ಸುರಿದ ಮೇಲೆಯೇ ಅದನ್ನು ತೆಗೆಯಬೇಕು.

ನಾನು— ಈಗ ತಾಜಾ ಕಲಂ ಹೇಳುತ್ತೇನೆ. ನಿನ್ನನು ಇಲ್ಲಿ ಸ್ಥಾಪಿಸಿ ಎಷ್ಟು ವರುಷಗಳಾದುವು?

ಮಹಾ- ಮುನ್ನೂರಾಯಿತೆಂದೆನಲ್ಲ. ಅಂದರೆ ನನಗೆ ಪೂಜೆಯು ನಿಂತೇ ಅರವತ್ತಾಯಿತು.

ನಾನು — ಮುನ್ನೂರು ವರುಷ! ಅಂದರೆ ಇಲ್ಲಿಗೆ ಬ್ರಿಟಿಷರು ಬಂದಾಗಲೇ ಬಂದೆ; ಅಂದರೆ ಅವರೇನು ನಿನ್ನನ್ನು ತರಲಿಲ್ಲವಷ್ಟೆ? ಆದರೆ ನಮ್ಮೂರಿನ ಒಬ್ಬ ಮಹಾಲಿಂಗನಿದ್ದಾನೆ. ಅವನನ್ನು ಪಾಂಡವರು ತಂದು ಸ್ಥಾಪಿಸಿದರಂತೆ.

ಮಹಾ-ನನ್ನ ವಿಷಯದಲ್ಲೂ ಹಾಗೇ ಕಥೆಯಿತ್ತು. ತಮ್ಮ ಪಾಪವೆಲ್ಲ ಪಾಂಡವರ ತಲೆಯ ಮೇಲೆ ಬೀಳಲಿ ಎಂದು ಜನ ತಿಳಿದಿರಬೇಕು.

ನಾನು — ಇರಲಿ, ನಿನಗೆ ಉಂಬಳಿ, ಗಿಂಬಳಿ ಇದ್ದಿರಲಿಲ್ಲವೆ?

ಮಹಾ--ಇತ್ತು. ಒಂದು ಹತ್ತು ವರುಷ ಭಾರಿ ಉತ್ಸವ, ಪೂಜೆ, ಎಲ್ಲವೂ ಆದುವು. 'ದೇವರೆಂದರೆ ಮಲೆಯೂರ ಮಹಾಲಿಂಗ' ಎನಿಸಿಕೊಂಡೆ. ಕೊನೆಗೆ ಉಂಬಳಿಗಾಗಿ ನಾಲ್ಕು ಸಾರಿ ಕೈಕೈ ಆಯಿತು ನನ್ನ ಸನ್ನಿಧಿಯಲ್ಲಿ...ಅನಂತರ ಉಂಬಳಿಯನ್ನೆಲ್ಲಾ ತಿಂದರು, ನಾನು ಮಾತ್ರ ಉಳಿದೆ.

ನಾನು — ಪೂಜೆ, ಗೀಜೆ....

ಮಹಾ — ಯತ್ರ ತಸದೀಕು; ತತ್ರ ಭಕ್ತಿ!

ನಾನು — ಹೋಗಲಿ, ಬರಿಯ ಗುಡಿಯನ್ನಾದರೂ ಬಿಡಬಹುದಿತ್ತಲ್ಲವೇ?

ಮಹಾ — ಪೂಜೆ ಹೋಯಿತು, ಮಾಡಿನ ಹುಲ್ಲೂ ಕೊಳೆಯಿತು. ಬಾವಲಿಗಳು ಸಹ ನಾಚಿಕೊಂಡು ಇಲ್ಲಿಂದ ಹೊರಟವು. ಒಂದೊಂದೇ ಮರ,ಮೋಪುಗಳು ಕೊಳೆತವು. ಈಗ ನನ್ನ ಗುಡಿಕಲ್ಲುಗಳು ಯಾರಾರ ಮನೆಯ ಬಚ್ಚಲು, ಮೆಟ್ಟಲುಗಳನ್ನು ಅಲಂಕರಿಸುತ್ತಿರಬೇಕು.

ನಾನು — ಗಂಧವಿಲ್ಲ, ಅಭಿಷೇಕವಿಲ್ಲ, ಗುಡಿಯಿಲ್ಲ, ಗೋಪುರವಿಲ್ಲ........

ಮಹಾ — ಎಲ್ಲವೂ ಇದೆ. ಗಂಧ-ಮೇಲಿಂದ; ಅಭಿಷೇಕ-ಅಪೂರ್ವಕ್ಕೆ ಈ ಹಾದಿಯಾಗಿ ಸಾಗುವ ನಾಯಿಗಳಿಂದ; ಗೋಪುರ-ನೀಲವಾದುದು. ಇಲ್ಲ--ನಾನು ಮೂರನೆಯ ಕಣ್ಣನ್ನು ತೆರೆಯದೆ ಮೋಸವಾಯಿತು.

ನಾನು- ಅದುಹಾಗೇನೇ! ಈಗ ನೋಡು ಬಬ್ಬರ್ಯ,ಪಂಜುರ್ಲಿ,

ಕಲ್ಲುರ್ಟಿ, ಇವಕ್ಕೆಲ್ಲ ನೇಮ ತಪ್ಪುವುದಿದೆಯೇ? ನೀನು ಗಾಂಧಿಪಾರ್ಟಿ ಸೇರಿದೆ. ಜಬರ್ ದಸ್ತಿಯಿಲ್ಲದೆಯಾರೂದೇವರನ್ನು ಕೇಳುವುದಿಲ್ಲ. ನಿನ್ನಣ್ಣ ಗುಜರಾತಿನ ಸೋಮನಾಥನು ಮರ್ಯಾದೆ ಕಳೆದುಕೊಂಡಿಲ್ಲವೇ? ನಾನು ಅನ್ನುತ್ತೇನೆ—ನೀವು 'ದೇವರು' ಎಂಬ ಬಾಬುಗಳು, ಹೀಗೆ ಪೆಚ್ಚಾಗಿರಕೂಡದು. ಹಾಲು, ಉಂಡ್ಲಕು, ಕಡಬು, ಪಾಯಸ ಇವನ್ನು ವರ್ಜ್ಯಮಾಡಿರಿ. ಇನ್ನು ಬ್ರಾಂಬ್ರ ಗಿಲೀಟು, 'ರುದ್ರ' ಅನ್ನುತ್ತಾರಲ್ಲ, ಮಕ್ಕಳು ಮಗ್ಗಿಯೆನ್ನುವ ಹಾಗೆ-ಪಟಪಟ ಸುರಿಯುವ ಲೆಕ್ಕ-ಇವೆಲ್ಲಕ್ಕೆ ವಶರಾಗಬಾರದು.

ಮಹಾ—ಮತ್ತೇನು ಮಾಡಲಿ?

ನಾನು—ಪ್ರಳಯಕಾಲದ ಮನುಷ್ಯ ನೀನಲ್ಲವೇ!

ಮಹಾ—ಫಣೆಗಣ್ಣು ತೆರೆಯಬೇಕೇ?

ನಾನು--ಸಧ್ಯ ಆಯಿತು. ಎಲ್ಲಾ ಸುಟ್ಟಿತೆಂದರೆ ಮತ್ತೇನು ಉಳಿಯುವುದು? ನಮ್ಮ ಸಬ್ರಾಯಸೆಟ್ಟರ ಹಾಗೆ ಆಸ್ತಿ ಧ್ವಂಸಮಾಡಿರೆ ನಾಳೆ ಏಕಾದಶಿ. ಸುಡಬಾರದು-ಸುಟ್ಟ ಹಾಗೆ ಆಗಬೇಕು. ಪೂಜಾರಿ ಬಂದರೆ- 'ಮೂಗು ಕೊಯ್ದುಕೊಡು' ಎನ್ನು. ಮಕ್ಕಳನ್ನು ಕೇಳಲಿಕ್ಕೆ ಬಂದರೆ- 'ಹೆಚ್ಚಾದವರಿಂದ ಕಡ ತಕ್ಕೊಳ್ಳಿ' ಎನ್ನು. ತೆಂಗಿನಕಾಯಿ, ಕಡಲೆ ಬೇಳೆ ತಂದರೆ 'ಕುದುರೆಗೆ ಹಾಕಿ' ಎನ್ನು. 'ನನಗೆ ಬಲಿ ಬೇಕು! ನಿಮ್ಮಂತಹರ ತಲೆ! ಮಿದುಳಿಲ್ಲದ ತಲೆಗಳ ಬಲಿಬೇಕೆ'ಂದು ಘರ್ಜಿಸು.

ಮಹಾ--ಯಾರಾದರೂ ಆ ಶರ್ತದ ಮೇಲೆ ನನ್ನ ಬಳಿಗೆ ಬಂದಾರೆಯೇ? ನನಗೆ ಗುಡಿಯನ್ನು ತಿರುಗಿ ಕಟ್ಟಿಸಿಕೊಟ್ಟಾರೆಯೇ?

ನಾನು—ಎಲಾ ಅಷ್ಟು ಗೊತ್ತಾಗದೇ? ಸ್ವಸ್ತ, ಊರಿಂದೂರು ತಿರುಗಬಾರದೇ ನನ್ನ ಹಾಗೆ. ಗುಡಿಕಟ್ಟಿ ಕೊಡುತ್ತಾರೆ ಎಂದು ಗುಂಡುಕಲ್ಲಾಗಿ ಬಿದ್ದೇ ನಿನ್ನ ಅವಸ್ಥೆ ಹೀಗಾಯಿತು—ಹೊರಡು ಸರ್ಕೀಟಿಗೆ.

ನಿನ್ನನ್ನು ಜನರು ನೋಡಬೇಕೆನ್ನುತ್ತಾರೋ—ಬರಲಿ ನಿನ್ನ ಹಿಂದೆ. ಇದ್ದಲ್ಲೇ ಬಿದ್ದಿದ್ದರೆ ಯಾರಿಗಾದರೂ ಮರ್ಯಾದೆ ದೊರಕೀತೆ?

ಅಷ್ಟನ್ನು ನುಡಿದೆ. ಮಹಾಲಿಂಗನು ಮತ್ತೆ ಮಾತನಾಡಲಿಲ್ಲ. ನಾನು ಸಿಟ್ಟಾಗಿ ಹೊರಟೆ! ಆ ದಿನ ಸಂಜೆ ಮರಳಿ ಬರುವಾಗ ಮಹಾಲಿಂಗನ ತಲೆಯ ಮೇಲೆ ಕುಳಿತು, ಹಿಂದಿನ ದಿನದ 'ಹಾರುವ' ತಿರುಗಿ ಮಂತ್ರ ಹೇಳುತ್ತಿದ್ದ.

ಮುಂದಿನ ವರುಷ ಅದೇ ತಾವಿನಲ್ಲಿ ಒಂದು ಸ್ಕೌಟ್ ಕ್ಯಾಂಪ್ ಆಯಿತು. ಆ ದಿವಸ ಮಹಾಲಿಂಗನನ್ನು ಹಿಡಿದು, ಪಯಸ್ವಿನಿ ಕಲ್ಲಿನ ಮೇಲೆ ಉರುಳಿಸಿ,ಅವನ ಬೆಂಬಲದಿಂದ ಚಟ್ನಿ ಪುಡಿ ಮಾಡಿದರು.

ಆಶ್ಚರ್ಯವೆಲ್ಲಿ? ನಿಂತಲ್ಲೇ ನಿಂತರೆ ದೇವರಿಗೂ ಮರ್ಯಾದೆ ಇಲ್ಲ. ಸಂಚಾರಿ ಯುಗಕ್ಕೆ ಸರ್ಕೀಟಿನ ದೇವರು ಬೇಡವೇ?



# ಕಲ್ಕುಡನ ಗುಹೆ

ನಮ್ಮ ನಾಡಿನ ಮೂಡು ಪ್ರಾಂತದಲ್ಲೊಮ್ಮೆ ಅಲೆದಾಡುವ ಸುಯೋಗ ದೊರೆಯಿತು. ಕಾಡುಮೇಡುಗಳ ನನ್ನ ಮಮತೆಯಿಂದಾಗಿ, ಒಮ್ಮೆ ಸಹ್ಯಾದ್ರಿಯ ಶಿಖರವೊಂದನ್ನು ನೋಡಹೋದವನು, ಅತ್ತಿತ್ತ ಅಲೆದಾಡಿ, ಹಾದಿ ತಪ್ಪಿ, ಬೇಸಗೆಯ ಕಡು ಬಿಸಿಲಿಗೆ, ದಿನದ ನಡು ಮಧ್ಯಾಹ್ನಕ್ಕೆ, ಒಂದು ಕಾಡಿನ ಮರೆಯನ್ನು ಬಂದು ಸೇರಿದೆ. ಎದುರು -ತುಟುಕುತ್ತ, ಬದುಕಿರುವೆನೆಂದು ಹೇಳಿ ನಾಡಿ ಮಾತ್ರ ಬಡಿದು ಸಾಗುತ್ತಿದ್ದ, ಬೆಟ್ಟದ ಬತ್ತಿದ ಅಬ್ಬಿಯಿತ್ತು. ನನ್ನ ಸುತ್ತಮುತ್ತ "ಏನೇ ಬರಲಿ ತಮ್ಮ ಮರೆಯಲ್ಲಿ ಅವನ್ನು ಅಡಗಿಸಬಲ್ಲೆವು" ಎಂಬಷ್ಟು ದಟ್ಟನಾಗಿ ಬೆಳೆದ ಮರಗಳು. ಹಾದಿತಪ್ಪಿದ ಭೀತಿ ನನಗಿದ್ದರೂ ಬೇಗೆಗೆ ಬಂದವನಿಗೆ ಅಂಥ ಆವರಣವು, ಅರವಟ್ಟಿಗೆ ಅನ್ನಛತ್ರಗಳಿಗಿಂತ, ಹೆಚ್ಚಿನ ಇಂಬುಳ್ಳದೆಂದು ತೋರುತ್ತಿತ್ತು. ಹಾಗೆಯೇ ಬೆರಳಿಂದ ಕೆನ್ನೆಗಳ ಬೆವರನ್ನು ಸವರುತ್ತ, ಉಸಿರ್ಗರೆಯುತ್ತ—ಹೆಮ್ಮರವೊಂದರ ಹೆಬ್ಬಾವಿನಂಥ ಬೇರಿನ ಮೇಲಕ್ಕೆ ಹೋಗಿ ಕುಳಿತೆ.

ಅರೆ ತಾಸಿನಲ್ಲಿ ನನ್ನ ದಣಿವು ಮಾಯವಾಯಿತು. ಅಬ್ಬಿಯ ನೀರಿನ ಪಾನ, ಪ್ರಕ್ಷಾಳನೆಗಳಿಂದ ನನ್ನ ಮೈ ತಂಪಿಟ್ಟಿತು. ಬುದ್ಧಿ ತನ್ನ ನೆಲೆಗೆ ಬಂದು ನಿಂತಿತು. 'ಹೊತ್ತೆಷ್ಟಾಯಿತು?' ಎಂದು ಮೇಲಕ್ಕೆ ಕತ್ತೆತ್ತಲು, ಎಲೆಗಳ ಚಪ್ಪರದಲ್ಲಿ ಸೂರ್ಯನ ಸುಳಿವೇ ಕಾಣಿಸಲಿಲ್ಲ. ಆದರೂ ಆ ತಾವು ತಂಪಾಗಿತ್ತೆಂದು ಅಲ್ಲೇ ಕುಳಿತೆ. ನನ್ನ ಕಾವ್ಯದೊಡಲು ಈ ತಾಣವನ್ನು ಕಂಡು "ನವರಸಗಳ ಊಟವನ್ನು ಈ ಸ್ಥಳದಲ್ಲಿ ನನಗೆ ಯಾರಾದರೂ ಬಡಿಸುವವರಿಲ್ಲವಲ್ಲ" ಎಂದು ಬೇಡಿತು.

ಆದರೆ ಕನಸಿನ ಮುಂಡಿಗೆಯಲ್ಲವೇ? ಹಸಿವನ್ನು ಹೆಚ್ಚಿಸಬಹುದು; ನೆನಪು ಗಳನ್ನು ಕೆರಳಿಸಬಹುದು; ಅದರಿಂದ ಹಸಿವನ್ನು ಮಾತ್ರ ಹಿಂಗಿಸಲಾ ಗದು. ತಿರುಗಿ ನನ್ನ ಮೂತಿ ಸೊಟ್ಟಾಗಿ, ಹುಬ್ಬುಗಳೆಡೆಯಲ್ಲಿ ನಿರಿಗಟ್ಟಿ, ದೃಷ್ಟಿಯು, ಹರಿಯುವ ನೀರನ್ನು ಹೊಕ್ಕಿತು. ಆಗಲೇ ಆಶ್ಚರ್ಯಕ್ಕೆ ಆ ರಂಭ. ನೀರಲ್ಲಿ ಕಿಸ್ಕಾರಹೂವೊಂದು ತೇಲುತ್ತ ಬರುತ್ತಿತ್ತು. ಹೋಗಿ, ಕೆಂ ಬಣ್ಣವೆಂದಂಜದೆ, ಅದಕ್ಕೆ ಕೈಯಿಕ್ಕಿದೆ. "ಸಮಾಜವಾದಿಗಳ ಆಸೆಯಾದ ಬಣ್ಣವೇ" ಎಂದು ಉದ್ಗರಿಸಿದೆ. ಮರುನಿಮಿಷಕ್ಕೆ ನನ್ನ ವಿಮರ್ಶಾ ಬುದ್ಧಿಯು ಕುದಿಗೆ ಬಂದಿತು. ಎಲ್ಲಿನ ಹೂವಿದು? ಈ ಹೂವು ಬೆಳೆ ಯುವ ತಾಣ ಇದಲ್ಲ. ಯಾರೋ ಮನುಷ್ಯರು ಇದನ್ನು ತಂದು ಇಲ್ಲಿ ಕೆಡೆದಿರಬೇಕು. ನ್ಯೂಟನನ ಪ್ರಮೇಯಾನುಸಾರ—"ಹೂವು ನೀರಿನ ಪ್ರವಾಹದಿಂದ ಮೇಲಕ್ಕೆ ಏರಿರದೆ, ಮೇಲಿಂದ ಕೆಳಕ್ಕೆ ಬಂದಿರಬೇಕು" ಎಂದು ತರ್ಕಿಸಿದೆ.

ಆ ತನಕ, ಹಾದಿ ತಪ್ಪಿಬಂದ ನಾನು--"ಹೇಗೂ ಆಗಲಿ ನೇರಾಗಿ ಬೆಟ್ಟ ಇಳಿದು ಸಾಗಿದರೆ ಊರನ್ನು ಸೇರಬಹುದು" ಎಂದು ತಿಳಿದವನು, ಈಗ ಹೂವೆಲ್ಲಿಂದ ಬಂತೆಂದು ತಿಳಿಯಲು, ಬೆಟ್ಟದ ಮೇಲೇರಲು ಹವ ಣಿಸಬೇಕೇ? ಕುತೂಹಲವೇ ನನ್ನ ಪೆಟ್ರೋಲಾಯಿತು. ಅದರ ಬಲ ದಿಂದ ನಾನು ಬರಿಯ ನೂರು ಗಜ ಮೇಲೆ ಚಲಿಸಿದ್ದೇನಷ್ಟೆ—ಬಂಡೆ ಗಳರಾಶಿಯೊಂದು ಎದುರಿಗೆ ಕಾಣಿಸಿತು. ಅದರ ಎದುರು ತುಸು ಚಪ್ಪ ಟೆಯಾದ ನೆಲ. ಅಲ್ಲೆರಡು ಮೂರು ಚಪ್ಪಡಿಕಲ್ಲುಗಳನ್ನು ಮಂಟಪದ ಆಕಾರವಾಗಿ ನಟ್ಟಿದ್ದರು. ಒಳಗಡೆ ಬೇರೊಂದು ಕಲ್ಲು! ಅದಕ್ಕೆ ಎಣ್ಣೆ ಸವರಿ, ಜಿಡ್ಡು ಹತ್ತಿ, ಅದರ ರೂಪವಡಗಿತ್ತು. ಬಳಿಯಲ್ಲಿ ಈಗ ತಾನೇ ಆರಿಹೋದೊಂದು ಹಣತೆ. ನೆಲದಲ್ಲೆಲ್ಲ ಚೆದರಿಬಿದ್ದ ಸಿಂಗಾರ, ಕಿಸ್ಕಾರ, ಕೇದಗೆ ಹೂವುಗಳು. ತುಸು ದೂರದಲ್ಲಿ—ತಮ್ಮ ಇಹಲೀಲೆಯನ್ನು

ಮುಗಿಸಿದ ಕೋಳಿಯ ಪುಕ್ಕಗಳು. ಪುಕ್ಕಗಳು ಮಾತ್ರ! ಶರೀರವಲ್ಲ. ಅಂತು-"ಅಲ್ಲಿ ಅಂದು ತಾನೇ ಮಾನವರ ಸಂಚಾರವಾಗಿತ್ತು" ಎಂಬ ಆಸೆಯು ನನ್ನಲ್ಲಿ ಮೂಡಿತು. ನನ್ನ ಹಳೆಯ ನೆನಹನ್ನು ಹರಡಿ ನೋಡಿದೆ. ಆಗ ನನಗೆ "ಈ ಸ್ಥಳವು ಹೆಸರಾದ ಬೆಟ್ಟದ ಕಲ್ಕುಡನ ಗುಡಿ ಇರಬೇಕು" ಎಂದು ಅನಿಸಿತು.

ದಕ್ಷಿಣ ಕನ್ನಡದವರಿಗೆ ಮಾತ್ರ ಕಲ್ಕುಡನ ವಿಚಾರ ಗೊತ್ತು. ನಮ್ಮಲ್ಲಿ ಇಂದಿಗೂ ದೇವರುಗಳಿಗಿಂತ ಮಿಗಿಲಾಗಿ ಕಲ್ಕುಡ, ಕಲ್ಲುರ್ಟಿ, ಪಂಜುರ್ಲಿ, ಬೊಬ್ಬರ್ಯ, ಗುಳಿಗ — ಮೊದಲಾದ ದೆವ್ವಗಳೇನೆ ಆಳಿ ಕೊಂಡು ಬಂದಿದ್ದಾರೆ. ಅದರಲ್ಲಿಯೂ ಬೆಟ್ಟದ ಕಲ್ಕುಡ ನಮ್ಮ ಪ್ರಾಂತಕ್ಕೆ ತೀರ ಹೆಸರಾದವ. ಯಾವ ಗುಡಿಯಿದು?-ಎಂದು ಭೌಗೋಲಿಕ ವಿಮರ್ಶೆಗೆ ಮುಂದುವರಿಯ ಬೇಡಿರಿ. ಕಾರಣವಿಷ್ಟೆ-ಅಲ್ಲಿನ ಪೂಜಾ ದಿನವಲ್ಲದೆ ಉಳಿದ ದಿನ, ಅದು ಯಾರಿಗೂ ಕಾಣಿಸುವ ಸ್ಥಳವಲ್ಲವಂತೆ! ಅಂಥ ಪವಿತ್ರ ಸ್ಥಳವನ್ನು ಎಲ್ಲಾ ಬಗೆಯ ನಾಸ್ತಿಕರ ತುಳಿತಕ್ಕೆ ಬಲಿಯಾಗಿಸಬಾರದೆಂದು ಆ ಸ್ಥಳದ ನಿಜವಾದ ಗುರುತನ್ನು ಅಡಗಿಸಿಯೇ ನಾನೂ ಲೇಖ ಬರೆಯುತ್ತಿದ್ದೇನೆ.

ಅಂತು ಕಲ್ಕುಡನ ಗುಡಿಯ ಮುಂದಕ್ಕೆ ಹೋಗಿ ನಿಂತೆ. ನಾನಲ್ಲಿಗೆ ಅರೆತಾಸು ಮುಂಚಿತವಾಗಿ ಬಂದಿದ್ದರೆ, ಒಬ್ಬರಲ್ಲ ಒಬ್ಬರು ನನಗೆ ಸಂಧಿಸಿ-ದಾರಿ ತೋರಿಸುತ್ತಿದ್ದರೋ ಏನೋ. ಈಗ ನನಗೆ ಅಲ್ಲಿರುವುದಕ್ಕೂ ಭೀತಿ; ಅಲ್ಲಿಂದ ಹೊರಡಲೂ ಭೀತಿ. ಕಲ್ಕುಡನ ವಿಚಾರ ನೀವೂ ತಿಳಿದರೆ ನನ್ನ ಭೀತಿಯ ಕಾರಣ ತಿಳಿದೀತು. ಕಲ್ಕುಡನಿಗೆ ವರ್ಷಕ್ಕೆ ಒಂದೇ ಒಂದು ಪೂಜೆ ಸಂದರೆ ಸಾಕಂತೆ. ಬರಿಯ ಹನ್ನೆರಡು ಕೋಳಿಗಳ ಸಂತರ್ಪಣೆ ನಡೆಯಿಸಿದರೆ ಸಾಕು. ಇಲ್ಲವಾದರೆ-ಅವನು ಕಳುಹಿಸುವ ಹುಲಿಗಳಿಂದಾಗಿ, ಬೆಟ್ಟದ ಕೆಳಗಿನ ಹಳ್ಳಿಗಳ ಜಾನುವಾರುಗಳು ಉಳಿ

ಯುವುದು ಕಷ್ಟ. ನಾನು ಕುಳಿತಾಗಲೇ ಬಳಿಯಲ್ಲಿ ತರಗೆಲೆಗಳ ಸದ್ದಾಯಿತು; ನನ್ನ ಎದೆ ಜುಮ್ಮಾಯಿತು. ಕತ್ತು ತಿರುಗಿಸಿ ನೋಡಿದಲ್ಲಿ ಬರಿ ಪುಲಿಯೊಂದು ಈಗ ತಾನೇ ನಡೆದುಹೋದಂತೆ ಕಂಡಿತು. ಅದರ ವಾಸನೆಯಂತು, ಕರಟಿದ ಹಣತೆಯ ಬತ್ತಿಯ ನಾತವನ್ನು ಮೀರಿಸಿ, ನನ್ನ ಮೂಗನ್ನು ಮುರಿಯಿತು. ಕಲ್ಕುಡನ ಪೂಜೆ ಸಮನಾಗಿ ನಡೆಯದಿದ್ದರೆ, ಕೆಳಗಿನ ಬಯಲಲ್ಲಿ ಸಮನಾಗಿ ಮಳೆಯಾದರೂ, ಬೆಳೆ ಉಳಿಯದು. ಉಳಿದರೆ ಅವುಗಳಲ್ಲಿ ಅರೆವಾಸಿಯಷ್ಟು ಪೈರು-ಕಾಟಿ, ದುಡ್ಡು, ಕಡವೆಗಳ ಪಾಲಿಗೆ ಹೋಗಬಹುದು. ಬಲಿಕೊಡದ ವರ್ಷ ಅದರ ಇಮ್ಮಡಿ ನಷ್ಟವಾದೀತು. ಇನ್ನು ಕಲ್ಕುಡನ ರಾಜ್ಯವನ್ನಾರಾದರೂ ಸೊಕ್ಕಿ ಹೊಕ್ಕು, ಸಂಚರಿಸಿದ್ದಾದರೆ, ಅವನಿಗೆ ನಡುಹಗಲಲ್ಲೇ ಕಣ್ಣು ಕಾಣಿಸದಂತಾಗಿ, ಅವನು ಸಹ್ಯಾದ್ರಿಯಲ್ಲಿ ಶತವರ್ಷಕಾಲ ಹಾದಿಯರಿಯದೆ ಅಲೆದಾಡುತ್ತಿರಬೇಕಂತೆ ... ಈ ಕತೆಯ ನೆನಪು, ಆ ಸ್ಥಳದ ರಚನೆ— ಇವುಗಳು ನನ್ನಲ್ಲಿನ ಭೀತಿಯನ್ನು ನೂರ್ಮಡಿಸಿದುವು. ಆದರೆ ಕಲ್ಕುಡನು ಒಲಿದರೆ 'ನಮ್ಮ ನಸೀಬು ಖುಲಾಯಿಸುವುದಂತೆ.' ಈ ತಾಣದಲ್ಲಿ ಕೊಪ್ಪರಿಗೆಗಟ್ಟಲೆಯಲ್ಲಿ ದ್ರವ್ಯ ಹೂತಿದೆಯಂತೆ. ಅವನು ತೋರಿಸಿದಷ್ಟು ನಿಮ್ಮ ಪಾಲಿಗೆ ಸಿಗುವ ಸಂಭವವಿದೆ. ನಮ್ಮೂರಿನ ಭೀಮು ಪೂಜಾರಿಯ ಮನೆಯಲ್ಲಿ, ಏನಾದರೂ ಹತ್ತು ಹನ್ನೆರಡು ಚರಿಗೆಗಳಲ್ಲಿ ನಾಣ್ಯಗಳೇ ತುಂಬಿವೆ— ಎನ್ನುತ್ತಾರೆ. ಅವನ ಹಿರಿಯರಲ್ಲೊಬ್ಬರು ಈ ಕಲ್ಕುಡನ ಅತಿ ಭಕ್ತರಾಗಿದ್ದರಂತೆ. ಈ ಎಲ್ಲ ಕಥೆಗಳನ್ನು ನೆನೆನೆನೆದು ನನಗಂತು "ದೇವರನ್ನು ನಂಬಿ ದೊಡ್ಡವನಾಗದೆ ಹೋದೆ; ಈ ದೆವ್ವವನ್ನು ನಂಬಿಯಾದರೂ ದಾರಿದ್ರ್ಯ ಕಳಕೊಳ್ಳಬಾರದೇಕೆ?" ಎಂಡೆನಿಸಿತು.

ಈ ಸಮಯದೊಳಗೆ ನನ್ನ ಮೈಯನ್ನು ನಾನು ನೋಡುತ್ತೇನೆ: ಬೆವರಿನ ಮಳೆಯಾಗಿಹೋಗಿತ್ತು! ಕಾಲನ್ನು, ಕೈಯನ್ನು ಕೆಳಗಿಂದ ಎತ್ತಿ

ಡ್ಡಾದರೆ—ಅವಕ್ಕೆ ಮಲೆಜ್ವರದ ಕಂಪನೆ ಬರುತ್ತಿತ್ತು. ನನಗೆ ಜ್ವರ ಬಂದಿದೆಯೋ ಎಂದು ಊಹಿಸಿ, ನನ್ನ ಹೊಟ್ಟೆಯನ್ನು ನಾನು ಸವರಿ ಕೊಂಡು ನೋಡಿದರೆ ಅದು ಜ್ವರವಾಗಿರಲಿಲ್ಲ. ನನ್ನ ಹೊಟ್ಟೆ, ನಾಲ್ಕು ದಿನದ ಹಸಿ ತಂಗುಳಿಗಿಂತಲೂ ತಣಿದುಹೋಗಿತ್ತು. ಆಗ ನನಗೆ ಅನಿಸಿತು--ನನಗೆ ತಿಳಿಯದಂತೆ ನಾನು ಅಂಜಿಕೊಂಡಿದ್ದೇನೆ--ಎಂದು. ಈ ಸ್ಥಳದಲ್ಲಿ ನನ್ನ ಎದೆಗಾರಿಕೆಯು ಏನು ಮೊಸಲು?

ನಿಂತಲ್ಲೇ ಕುಳಿತೆ; ಕುಳಿತವನೇ ಕತ್ತು ಬಗ್ಗಿಸಿದೆ. ತಿರುಗಿ ಕಲ್ಕುಡನಿಗೆ ಮುಖಮಾಡಿ ಕುಳಿತೆ. ನನ್ನ ಕಣ್ಣೆದುರಿಗೆ, ಒಂದು ಅಳಿಲು ಮರದಿಂದಿಳಿದು ಬಂದು ಕಲ್ಕುಡನ ತಲೆಯ ಮೇಲಕ್ಕೇರಿ, ಅಲ್ಲಿನ ಸಿಂಗಾರದ ಹೂವನ್ನು ಕಚ್ಚಿಕೊಂಡಿತು. ನಾನದನ್ನು ಗದರಿಸಿದೆ. ಅದು ಹೂವನ್ನು ಬಿಟ್ಟು ನನ್ನನ್ನು ಕಂಡು ಹೆದರಿ ಓಡಿತು. ಅಷ್ಟೆ! (ಈ ಸಂದರ್ಭದಿಂದ ನಾನೊಬ್ಬ ದಯಾನಂದ ಸರಸ್ವತಿಯಾಗಬಹುದಿತ್ತು; ಆಗಲಿಲ್ಲ). ಕ್ಷಣಮಾತ್ರದ ಆಟವದು . . . ತಿರುಗಿ ನನ್ನ ಮನಸ್ಸು ಯೋಚನೆಯಲ್ಲಿ ಮಗ್ನವಾಯಿತು. ದೃಷ್ಟಿಯು ನೆಲವನ್ನು ಕೊರೆಯಿತು!

ಆಗ ಒಮ್ಮೆಲೇ "ಏನು ಬೇಕು, ಯಾರು ನೀನು"-ಎಂದಂತೆ ನನಗೆ ಕೇಳಿಸಿತು. "ಯಾರಾದರೇನು-ಇಲ್ಲಿಂದ ಪಾರಾದರಾಗುತಿತ್ತು!" ಎಂಬ ಮಾತು ನನ್ನ ನಡುನಾಲಗೆಯಲ್ಲಿ ನಿಂತಾಗಲೇ "ಅರೇ, ನೀನು ರಸಿಕ, ಕವಿ, ರಸಋಷಿ . . . . "ಎಂದು ನಕ್ಕಂತಾಯಿತು. ಕತ್ತೆತ್ತಿದೆ. ಯಾರೂ ಇಲ್ಲ. "ನನಗೆ ಭ್ರಮೆ"—ಎನಿಸಿತು. ತಿರುಗಿ "ನಿನಗೇನು ಬೇಕು" ಎಂಬ ಮಾತು ಕೇಳಿತು! ಕತ್ತೆತ್ತಿದೆ; ಯಾರೂ ಇದ್ದಿಲ್ಲ. ಹೋಗಲಿ, ಕಲ್ಕುಡನೇ ಈ ಮಾತನ್ನು ಕೇಳುತ್ತಿರುವನೇನೋ ಎಂದೆನಿಸಿ, "ಇಲ್ಲಿಂದ ಮನೆಯನ್ನು ಸೇರಿದರೆ ಸಾಕು" ಎಂದೆ.

"ನಿನ್ನ ಮನೆಗೆ ನಿನ್ನನ್ನು ಸೇರಿಸುವ. ಆದರೆ ನೀನು ಈ ದಿವಸ

ಇಲ್ಲಿದ್ದು ನಾಳೆ ಹೊರಡು. ಈ ದಿನ ನನ್ನ ವರ್ಷದ ಜಾತ್ರೆ. ನಾನು ಈ ದಿನ ಬಾಯಿ ತೆರೆಯುವವ. ಉಳಿದ ದಿನ ನನಗೆ ಮೌನ. ಆದರೇನು-ಈ ಬೆಳಗ್ಗೆ ಇಲ್ಲಿಗೆ ಬಂದು ಹೋದ ನನ್ನ ಭಕ್ತರೆಲ್ಲರು ತಮಗೆ ಏನೇನು ಬೇಕೆಂದು, ಬೇಡಿ ಹೋದರೇ ವಿನಾ, ನನ್ನ ಸುಖದುಃಖಗಳನ್ನು ಯಾರೂ ಕೇಳಲಿಲ್ಲ" — ಎಂದಿತು.

"ನೀನು ಬೆಟ್ಟದ ಕಲ್ಕುಡನೇನು? ಹಾಗಿದ್ದರೆ ನೀನು ಕೊಡುಗೈಯ ದಾಸಿಯಂತೆ! ನಿನಗೆ ನಮ್ಮಿಂದ ಏನು ಬೇಕಾದೀತು? ನಾವೆಲ್ಲ ಬೇಡುವ ಜನ" ಎಂದು ಅವನನ್ನು ಹೊಗಳಿ ಉಬ್ಬಿಸಿದೆ.

"ನನಗೇನೂ ಬೇಕಿಲ್ಲ ನಿಜ — ಆದರೆ ನನ್ನ ಒಡಲ ದನಿಯನ್ನು ಕೇಳುವ ಜನರು ಬೇಕು. ನೀನು ಕವಿಯಾಗಿದ್ದರೆ ಕೇಳುವಿ ಎಂಬ ಆಸೆ. ಇತ್ತ ನನಗೂ ೫೦೦೦ ವರ್ಷಕಾಲ ಬಾಯಿಕಟ್ಟಿಕುಳಿತುಕೊಂಡ ದೀರ್ಘಕಾಲದ ಬೇಸರ ಹೋದೀತು."

"ಕಲ್ಕುಡಪ್ಪಾ — ನೀನಿಲ್ಲಿಗೆ ಬಂದು ೫೦೦೦ ವರ್ಷಗಳಾದುವೆ? ಹಾಗಿದ್ದರೆ ಅಷ್ಟು ದೀರ್ಘಕಾಲದ ಮೌನ ನಿನ್ನದೇ? ನೀನೆನ್ನುವ ಕವಿಜಾತಿಯು ಒಂದು ದಿನವಾದರೂ ನಿನ್ನಂತೆ ಮೌನವಾಗಿದ್ದರೆ ದೇಶಕ್ಕೇ ತುಂಬ ಹಿತವಿತ್ತು! ಅದರಿಂದೆಷ್ಟು ಕಾಗದ ಉಳಿತಾಯವಾಗುತ್ತಿತ್ತು" — ಎಂದೆ.

"ಕವಿ ಅಂಥ ಜಾತಿಯೆ?"

"ಕವಿಗೂ ಕಲ್ಕುಡಗೂ ಅಷ್ಟೇ ಭೇದ— ಒಂದು ಬಾಯಿ ಮುಚ್ಚಿ ಭಾವ ಪ್ರೇರಿಸುವುದು. ಇನ್ನೊಂದು ಭಾವತೋರಿ, ಬಾಯಿಯನ್ನು ಮುಚ್ಚಿಸುವುದು. ಅಲ್ಲದೆ ಈ ಕವಿಯು ತನ್ನದನ್ನೇ ತಾನು ಹೇಳುವವನು. ಅದನ್ನೇ ತಾನು ಬರೆದಾನಯೇ ಹೊರತು ಇನ್ನೊಬ್ಬರ ಮಾತು ಅವನಿಗೆ ಬೇಡ!"

"ಹಾಗಿರಲು ನೀನು ಕವಿಯಾಗಿರದಿದ್ದರೆ ಚಿಂತೆಯಿಲ್ಲ; ಅಂತು ನನ್ನ ಮಾತನ್ನಷ್ಟು ಕೇಳಿದರೂ ಸಾಕು—."

"ಆಗಲಿ—ನನ್ನನ್ನು ನೀನು ನಾಳೆಯಾದರೂ ಇಲ್ಲಿಂದ ಪಾರಾಗಿಸುವ ಭರವಸೆಯನ್ನು ಕೊಟ್ಟಲ್ಲಿ."

ಮರುಗಳಿಗೆಗೆ ನನ್ನ ಬ್ರಾಹ್ಮಣ ಹೊಟ್ಟೆಯು—"ಕಲ್ಕುಡ, ಬರಿ ಹೊಟ್ಟೆಯ ಬ್ರಾಹ್ಮಣಗೆ ನಿನ್ನ ಮಾತನ್ನು ಕೇಳುವ ಕಿವಿ ಬಂದೀತೆ!" ಎಂದು ನುಡಿಸಿತು.

"ಹೋಗು ಆ ಮರದ ಬಳಿಯಲ್ಲಿ ತಿನ್ನುವ ಹಣ್ಣುಗಳಿವೆ"—ಎಂದಂತಾಯಿತು. ಅಲ್ಲಿಗೆ ಹೋದೆ. ಪೂಜಾರಿಗಳು ಬಿಟ್ಟುಹೋದ ಒಂದು ತೆಂಗಿನಕಾಯಿ ಹೋಳು ಬಿದ್ದಿತ್ತು. ಬಳಿಯಲ್ಲಿ ಕಾಡುಮಾವಿನ ಹಣ್ಣುಗಳು ಉದುರಿಬಿದ್ದಿದ್ದವು. ಹೊಟ್ಟೆ ತಂಪಾಗುವಷ್ಟು ತಿಂದು ತೇಗಿದೆ.

ಆಗಲೇ ರಾತ್ರಿಯ ಯೋಚನೆ ನನಗೆ ಬಂದಿತು. ಹೆದರಿಕೆಯಾಯಿತು. ಅಲ್ಲೊಂದು ಅರ್ಧ ಉರಿದು ಬಿದ್ದ ಸೂಟಿಯನ್ನು ತಂದು "ಕಲ್ಕುಡ, ಇಲ್ಲೊಂದು ಶಿಬಿರಾಗ್ನಿ ಜ್ವಲಿಸಲೇ?" ಎಂದು ಕೇಳಿದೆ

"ಕತ್ತಲನ್ನು ಕಂಡು ಹೆದರಿಕೆಯಾದರೆ ಹಾಗೆ ಮಾಡು."

"ಹೆದರಿಕೆಯಲ್ಲ — ಸೊಳ್ಳೆಗಳ ನಿವಾರಣೆಗೆ" ಎಂದು ಆರೋಗ್ಯದ ನೆಪವನ್ನು ಹೇಳಿ, ಬೇಗನೇ ಅವಸರವಾಗಿ ತರಗೆಲೆ, ಒಣಕಟ್ಟಿಗೆಗಳನ್ನು ಅಲ್ಲಿ ಕೂಡಿಸಿ, ಒಂದು ಉರಿ ಹೊತ್ತಿಸಿದೆ. ನಿಜಕ್ಕೂ ನನ್ನ ಉರಿ ಬೆಳೆದಾಗುವಾಗ, ಸಂಜೆಯ ಸೂರ್ಯ ಮುಸುಕುಗೊಂಡಿದ್ದ.

ಸರಿ, ಉರಿಯ ಮುಂಗಡೆಯಲ್ಲಿ ಕುಳಿತು, ನಾನು ಕಲ್ಕುಡನೆದುರು ಕೈಗಟ್ಟಿ (ಬಿಮ್ಮಗೆ) "ಎ ಬೆಟ್ಟದ ಭೂತವೇ, ನಿದ್ರೆ ಬರುವತನಕ ನಿನ್ನ ಮಾತನ್ನು ಕೇಳುತ್ತೇನೆ- ನಡುವೆ ನಿದ್ರೆ ಬಂದರೆ ಬೇಸರಮಾಡಬೇಡ. ಅದು ನನಗೆ ಅಭ್ಯಾಸವಾಗಿಹೋಗಿದೆ. ಸಾಹಿತಿಯಾದ ನಾನು ಪರ

ರನ್ನು ಮಾತಿಂದ ಕೊರೆದು ಕೊರೆದು ಹಲವು ಬಾರಿ ನಿದ್ರೆ ಬರಿಸಿದ್ದೇನೆ. ಪ್ರತಿಯಾಗಿ ಅನೇಕರ ಮಾತುಗಳನ್ನು ಕೇಳಿ, ಅಲ್ಲೇನೆ ನಿದ್ರೆ ಹೋಗಿದ್ದೇನೆ. ಈಗ ನನಗೆ 'ಲೆಕ್ಚರು—ತೂಕಡಿಕೆ' ಎಂಬುವು ಅವಳಿ ಜವಳಿ ಕೂಸುಗಳೆಂದೇ ಅನಿಸುತ್ತಿದೆ!" ಎಂದೆ.

"ನನ್ನ ಮಾತು ರಸವತ್ತಾಗಿಲ್ಲವಾದರೆ—ತೂಕಡಿಸು; ಚಿಂತೆಯಿಲ್ಲ. ಅಲ್ಲದೆ ದಣಿದು ಬಂದಿದೆ ನಿನ್ನ ಶರೀರ!"

"ಇಷ್ಟೇ, ಮಾತಿನ ನಡುವೆ ನಿದ್ರಿಸಿದರೂ ತಪ್ಪಿಲ್ಲ. ಕೊನೆಗೆ ಧನ್ಯವಾದ ಸಮರ್ಪಣೆಯ ವೇಳೆಯಲ್ಲಾದರೂ ನಾನು ಎಚ್ಚರವಾಗಿರಬೇಡವೇ?" ಅಂದೆ.

ಕಲ್ಲುಕುಡನು ನಕ್ಕಂಥ ಸದ್ದಾಯಿತು! "ಆಗಲಿ" ಎಂದಂತಾಯಿತು. ಮುಂದೆ ೫೦೦ ವರ್ಷಗಳ ಕಾಲ ಬಿಗಿಹಿಡಿದ ಅವನ ಬಾಯಿ ಧಾರಾಕಾರವಾಗಿ, ಬೆಟ್ಟದ ಮಳೆಗಾಲದ ಅಬ್ಬಿಯಂತೆ, ಮಾತಿನ ಪ್ರವಾಹವನ್ನು ಹರಿಯಿಸಿತು.

"ನಾನು ಈಗೇನೆ ಕೆಳಗಿನ ಹಳ್ಳಿಗಾಡಿನವರು ಅಂಜಿ ಪೂಜಿಸುತ್ತಿರುವ ಕಲ್ಲುಕುಡ ಭೂತವೆನಿಸಿದ್ದೇನೆ-ಆ ವಿಚಾರದಲ್ಲಿ ಊರವನಾದ ನಿನಗೆ ಹೇಳಬೇಕಿಲ್ಲ. ಆದರೆ ನಾನು ಅನಾದಿಯಿಂದಲೂ ಕಲ್ಲುಕುಡನಾಗಿರಲಿಲ್ಲ"

"ಬೇರೇನಾಗಿದ್ದೆ?"

"ನನ್ನನ್ನು ಚೆನ್ನಾಗಿ ತಿಕ್ಕಿ ತೊಳೆದರೆ ತಿಳಿದೀತು. ನೂರಾರು ವರ್ಷಗಳ ಭಕ್ತಿಯು ಜಿಡ್ಡು ನನ್ನ ಮೈಗೆ ಅಂಟಿಕೊಂಡು, ನನ್ನ ನಿಜರೂಪವೇ ಯಾರಿಗೂ ಕಾಣಸಿಗದಂತಾಗಿದೆ. ಅಲ್ಲದೆನಾನಿಲ್ಲಿ ಪೂರ್ಣವಾಗಿಲ್ಲ; ನನ್ನ ಅರ್ಧವನ್ನು ನನ್ನ ಪೀಠವಾಗಿ ಹಾಸಿ, ನನ್ನ ಶಿರಸ್ಸನ್ನೇ ಇಲ್ಲಿ ನಟ್ಟಿದ್ದಾರೆ. ಇಂದಿಗೆ ಮುನ್ನೂರು ವರ್ಷಗಳ ಹಿಂದೆ ಈ ನಾಡೆಲ್ಲ ಅನಾಯಕವಾಗಿತ್ತು."

"ಅದಕ್ಕೂ ಹಿಂದೆ?"

"ಅದಕ್ಕೂ ಹಿಂದೇನೆ ನನಗೆ ಹೀಗಾಯಿತು........ ನನ್ನ ಅವಿಚ್ಛಿನ್ನ ವಾದ ಶರೀರವನ್ನು ಒಡೆದು ನನ್ನ ರುಂಡ, ಮುಂಡಗಳನ್ನು ಪೀಠದ ಮೇಲೇರಿಸಿ–ನನ್ನನ್ನು ಶಿವಲಿಂಗವಾಗಿ ಅರ್ಚಿಸಿದರು. ಆಗ ಶಿವಾಚಾ ರದ ದೊರೆಯೊಬ್ಬ ನೆರೆಸೀಮೆಯಲ್ಲಿ ಆಳುತ್ತಿದ್ದನು. ಅವನು ಊರಿನ ಬಂಡಾಯಕ್ಕೆ ಬೆದರಿ, ಇಲ್ಲಿ ಬಹುಕಾಲ ಅವಿತುಕೊಂಡಿದ್ದನು. ಈ ತಾಣವನ್ನು ಆರಿಸಿ, ಅಲ್ಲಿ ನನ್ನನ್ನೇ ಶಿವನನ್ನಾಗಿ ನಟ್ಟುಪೂಜಿಸಿದನು. ಒಂದು ದಿನ ಅನುಕೂಲ ಪರಿಸ್ಥಿತಿ ಬಂತೆಂದು, ನನ್ನನ್ನು ಬಿಟ್ಟು, ತನ್ನೂ ರನ್ನು ಸೇರಿದನು. ನನ್ನ ಆವಾಸದಲ್ಲಿ ಕಾಡುಪೊದೆ ಬೆಳೆಯಿತು. ಒಂದು ದಿನ ಇಲ್ಲಿನ ಮಲೆಕುಡಿಯರು ಬಂದು ನನ್ನನ್ನು ಉದ್ಧರಿಸಿದ್ದು. ನನ್ನನ್ನು ಅವರು ತಮ್ಮ ಕಲ್ಕುಡನನ್ನಾಗಿ ಮಾಡಿಕೊಂಡು ಪೂಜಿಸಿದರು."

"ಅದೇನದು — ರುಂಡವನ್ನು ಮುಂಡದ ಮೇಲೆ ನಟ್ಟ ಕಥೆ?"

"ಅದೇ! ನಾನು, ಇನ್ನು ಹೇಳಲಿರುವ ಕಥೆಗಳಂತೆ ಸೋಜಿಗವಾ ದದ್ದು. ನಾನಾಗ ವಿಷ್ಣು ವಿಗ್ರಹವಾಗಿದ್ದೆ. ನಿತ್ಯವೂ ನನ್ನ ಹಣೆಗೆ ಮೂರು ಮೂರು ಗೆರೆಗಳನ್ನೆಳೆದು ಪೂಜಿಸಿ — ಪೊಂಗಲು ಪುಳಿಯೋರೆಗಳನ್ನು ಸಮರ್ಪಿಸುತ್ತಿದ್ದರು.

"ಆ ನನ್ನನ್ನು ಎಲ್ಲಿಂದಲೋ ಇಲ್ಲಿಗೆ ಹೊತ್ತು ತಂದರು. ಇಲ್ಲಿಗೆ ಬಂದ ನನಗೆ, ಹಿಂದೊಂದು ಕಾಲ ಈ ಪ್ರಾಂತದಲ್ಲೇ ನಾನು ಶಿಲೆಯಾಗಿ ಬಿದ್ದಿದ್ದ ನೆನಪಾಯಿತು. ಯಾವನೋ ಒಬ್ಬ ಶಿಲ್ಪಿಯು ನನ್ನ ಸೊಗಕ್ಕೆ ಮೆಚ್ಚಿ, ನನ್ನನ್ನು ಇಲ್ಲಿಂದ ಕಿತ್ತು ಒಯ್ದಿದ್ದನು. ಬಲು ಹಿಂದಣ ಕಥೆ ಯದು. ಅಲ್ಲಿ ನನ್ನನ್ನು ಕಡೆದು 'ಪಾರ್ಶ್ವನಾಥ'ನನ್ನಾಗಿ ಮಾಡಿದ್ದನು. ಆಗ ಬಸದಿಯೊಂದರಲ್ಲಿ ನನ್ನನ್ನು ನಟ್ಟು ಪೂಜೆ ಸಲಿಸಿದ್ದರು."

"ವಿಷ್ಣುವಾಗಿದ್ದೆ ಎಂದೆ ನೀನು."

"ಅದೂ ನಿಜವೇ. ಅದೇ ವಿಷ್ಣುವೇ ನಾನು. ಜೈನರು ಬಸದಿಯಲ್ಲಿಟ್ಟ ನನ್ನನ್ನು ಕೆಲವು ಬ್ರಾಹ್ಮಣರು ಬಂದು ಕದ್ದೊಯ್ದರು. ನನಗೆ ಬಟ್ಟೆಯುಡಿಸಿ, ನನ್ನ ನಗ್ನತೆ ಬಿಡಿಸಿ, ನಾಮ ವಿರಿಸಿ—ವಿಷ್ಣುವನ್ನಾಗಿ ಮಾಡಿದರು. ಆಗ ನಾನು ವೈಷ್ಣವ ದೊರೆಯ ಮನೆತನವೊಂದಕ್ಕೆ ಕುಲದೇವನಾದೆ. ನನಗೆ ರತ್ನದ ಕಿರೀಟ ಬಂದಿತು. ಉಡಲು ಪೀತಾಂಬರ ಬಂದಿತು; ಮುತ್ತುಗಳ ಹಾರ ಬಂದಿತು. ಈ ಒಡವೆಗಳ ಆಸೆಯಿಂದ ತಿರುಗಿ ನಾನು ಅಪಹೃತನಾದೆ. ಈ ಪ್ರಾಂತಕ್ಕೆ ಆಗಲೇ ಬಂದೆ. ನನ್ನನ್ನು ಅಪಹರಿಸಿದವರು ನಾಸ್ತಿಕರೋ ತಿಳಿಯೆ, ಅಂತು ಚಿನ್ನ ರತ್ನಗಳನ್ನು ಕಳಚಿಬಿಟ್ಟು, ತಿರುಗಿ ನನಗೆ ಮೊದಲಿನ ನಗ್ನರೂಪವನ್ನು ಕೊಟ್ಟರು."

"ಏ ದುಷ್ಟರೇ! ಬರಿಯ ಚಿನ್ನ ಒಯ್ದಿದ್ದರೆ ಸಾಲದಿತ್ತೇ?" ಎಂದೆ ನಾನು.

"ಅದು ಸಾಕಿತ್ತು. ಆದರೆ ನನ್ನ ದುರ್ದೈವ ನನ್ನ ಬೆನ್ನು ಬಿಡಬೇಕಲ್ಲ. ನನ್ನ ಪೂಜೆಗಳು ಮಾಯವಾಗುವ ಯೋಗ ಬಂದೋ ಏನೋ, ನಾನು ಇಲ್ಲಿಗೆ ಬರುವಂತಾಯಿತು. ಆದರೆ ಆ ಪುಣ್ಯಾತ್ಮರು ನನ್ನ ಆಭರಣಗಳನ್ನು ಕಿತ್ತ ಬಳಿಕ, ನನ್ನನ್ನು ಹಾಗೇ ಇಡದಾದರು. ಅವರು ವಿಷ್ಣುವೆಂದು ತಂದ ನಾನು, ಬಟ್ಟೆ ಕಳಚಿದ ಬಳಿಕ, ತೀರ ನಗ್ನನಾದೆನಲ್ಲ! ಆ ಕಳ್ಳರಲ್ಲಿ ಕೆಲವರು ನನ್ನನ್ನು ನೋಡಿ ನಕ್ಕರು. ಕೆಲವರು-ನಕ್ಕು ಉಗುಳಿದರು. ಕಳ್ಳರ ಯಜಮಾನಿಯೊಬ್ಬಳು, ನನ್ನ ನಗ್ನತೆಯನ್ನು ಕಂಡು ನಾಚಿ ನನ್ನನ್ನು ತುಂಡರಿಸಲು ಆಜ್ಞೆಯಿತ್ತಳು. ಹೀಗಾಗಿ ನಾನಾಗ ಇಬ್ಭಾಗವಾದೆ. ಆ ಬಳಿಕ ಬಂದ ದೊರೆಯು, ಶಿವಾಚಾರದವನು. ಅವನು ಹಿರಿಯ ತುಂಡನ್ನು ಕವುಚಿ ಪೀಠವಾಗಿ ನಡಿಸಿದನು. ಅದರ ಮೇಲೆ ನನ್ನ ರುಂಡ ವಿರಿಸಿದನು. ನಾನು ಅವನಿಗೆ ಶಿವನಾದೆನು."

"ಆದರೂ ಚಿಂತೆಯಿಲ್ಲ. ನಿನಗೆ ತಿರುಗಿ ಪೂಜಾಯೋಗವು ಲಭಿಸಿ

ತಪ್ಪೆ" ಎಂದು ನಾನು ಕಲ್ಕುಡನಿಗೆ ಸಮಾಧಾನ ಹೇಳಿದೆ.

"ಅದು ಒಂದಲ್ಲ ಒಂದು ಕಾರಣದಿಂದ ಇಂದಿಗೂ ಉಳಿದುಬಂ ಡಿದೆ. ಸನ್ನ ತಾಣ ಕೆಲಕಾಲ ದರೋಡೆಕೋರರ ತಾಣವಾಗಿತ್ತು. ಅವರು ನನ್ನನ್ನು ಮಾರ್ಯಮ್ಮನಾಗಿಯೂ ತಿಳಿದಿದ್ದರು."

"ನೀನು ಇಲ್ಲೇ ಹುಟ್ಟಿದವನೆನ್ನುತ್ತೀಯಾ?"

"ಇಲ್ಲೇ—ನನ್ನ ಸೋದರ ಶಿಲೆಗಳೂ ನಿಂತಿವೆ. ಈ ನನ್ನ ಹಿಂದಿ ರುವ ಬಂಡೆಯ ಪೊಟರೆಯಲ್ಲಿ ನನ್ನ ಜನನವಾಯಿತು. ನಾಳೆ ಅಲ್ಲೆ ಲ್ಲವೂ ಸುತ್ತಿನೋಡು."

"ಆಗಿಂದಲೇ ನಿನ್ನ ಕತೆಯನ್ನು ಹೇಳಲಾರೆಯೇಕೆ? ಬಲು ವಿಚಿ ತ್ರಾನುಭವವು ನಿನ್ನದು. ಕಲ್ಲಾದರೂ ನಿನಗೆ ಕಾಲು ಬಂದಿತಲ್ಲ."

"ನಿನ್ನಿಂದಾಗಿ ನನಗೆ ಬಾಯೂ ಬಂದಿದೆ........ಈ ಗುಹೆಯನ್ನು ನೋಡು; ಇದು ಹಲವು ಸಾವಿರ ವರ್ಷಗಳಿಂದಲೂ ಇಲ್ಲೇ ಇದ್ದಿತ್ತು."

"ಇರಬೇಕು.'ಜಿಯಾಲಾಜಿ'ಯನ್ನು ನಂಬಬಹುದಾದರೆ ಶಿಲೆಯ ಕಲ್ಲುಗಳು ಬಲು ಗಟ್ಟಿ ಪದಾರ್ಥಗಳಂತೆ."

"ಆಗ ಅನಾದಿ ಕಾಲದ ಕಾಡು ಮನುಷ್ಯರ ಬಳಗವೊಂದು ಇಲ್ಲಿ ವಾಸಿಸಿತ್ತು."

"ಅದಕ್ಕೆ ಐತಿಹಾಸಿಕ ಆಧಾರಗಳಿವೆ. ಇರಲಿ, ಅವರು ಈಗಿನ ಮಲೆಕುಡಿಯರಂಥವರಿದ್ದಿರ ಬಹುದೇ?"

"ಹಾಗೂ ಸರಿಯೇ! ಆದರೆ ವಿಚಾರಶಕ್ತಿಯಲ್ಲಿ ಅವರಿಗೂ, ಇವ ರಿಗೂ, ನಿಮ್ಮ ಕೆಳಗಿನ ಬಯಲಿನವರಿಗೂ ಏನಾದರೂ ವ್ಯತ್ಯಾಸವಾ ಗಿದೆಯೇ!"

ನಾನು ನಕ್ಕೆ!

"ಏಕೆ ನಗುತ್ತೀ?" ಎಂದು ಪ್ರಶ್ನೆ ಬಂದಿತು.

"ನಿಜ — ನಮ್ಮ ದೇಶದ ವಿಚಾರಸರಣಿಯಲ್ಲಿ ಸಹಸ್ರ ವರ್ಷಗಳಿಂದೇನೂ ಮಾರ್ಪಾಟು ಆಗುವಂತಿಲ್ಲ. ಮಳೆ ನೀರಿನಿಂದ ನನ್ನಂಥ ಬಂಡೆಯಲ್ಲುಂಟಾದಷ್ಟು ವಿಪ್ಲವ ಸಹ, ನಮ್ಮ ಸಂಪ್ರದಾಯ, ಶ್ರದ್ಧೆಗಳಲ್ಲಿ ಉಂಟಾಗಲಾರದು."

"ಅದೇ — ನಿಜ...... ನೋಡು, ನನ್ನ ಹಿಂದಿರುವ ಬಂಡೆಗಳು ಆ ಕಾಡಾಡಿ ಜನಗಳ ಮನೆಯಾಗಿತ್ತು. ನಾಸಿರುವ ಈ ಮಂಟಪವು ಈಗ ದೇವಾಲಯವಾಗಿದೆ."

"ಆಗ."

"ಆಗಲೋ....... ನೀನು ನಗದಿರುವುದಾದರೆ ಹೇಳುತ್ತೇನೆ:

"ಇದು ಆ ಕಾಡಾಡಿ ಜನರಲ್ಲಿ, ಹಿರಿಯನೊಬ್ಬನ ಸಮಾಧಿ; ಅವನನ್ನು ಹುಗಿದ ಸ್ಥಳ. ಇಲ್ಲೇ ಅಗೆದಲ್ಲಿ ಅವನ ಎಲುಬುಗಳು ಇನ್ನೂ ಸಿಗಬಹುದು. ಸತ್ತಮೇಲೆಯೂ ಅವನಿಗೆ ಮಳೆ ಬಿಸಿಲಿನ ಬಾಧೆಯಾಗದಂತೆ ಇಲ್ಲಿನ ಈ ಕಲ್ಲುಗಳನ್ನು ನಟ್ಟರು. ಮುಂದೆ ಆ ಜನರು ಇಲ್ಲಿಂದೋಡಿ ಹೋದರು. ನಾವು ಆದಲ್ಲಿಂದ ಬೀಡು ಕೀಳುವುದು ಅವರ ಸ್ವಭಾವವಾಗಿತ್ತು."

"ಮಲೆಕುಡಿಯರಂತೆ."

"ಅಹುದು; ಹಾಗೆಯೇ ಈ ಮಂಟಪದ ನಡುವೆ ನನ್ನನ್ನು ಹಾಸಿದರು. ನಾನು ಆತನ ಪ್ರತಿನಿಧಿಯಂತೆ! ಆದರೆ ಆ ಜನರು ಇಲ್ಲಿಗೆ ಆಗಾಗ ಬಂದು ನನಗೆ ಕಾಳು, ಕಾಯಿಗಳನ್ನು ಅರ್ಪಿಸಿ, ಗುರುಪೂಜೆ ಸಲಿಸಿ ಹೋಗುತ್ತಿದ್ದರು. ಮುಂದೊಂದು ದಿನ ನಾನು ಅವರ ಕುಲಕ್ಕೇನೆ ಯಾತ್ರಾಸ್ಥಳವಾದೆ. ಇದು ತಲಾಂತರದ ಕಥೆ.

"ಅವರು ಬಂದು ಹೋಗುವಾಗಲೊಂದು ದಿನ— ಈ ಕಾಡಿನ ಬಲ್ಲೆಯಲ್ಲಿ, ವರ್ಷದ ಒಂದು ದಿನ — ಸೂರ್ಯನ ಬೆಳಗಿನ ಬೆಳಕು,

ಸಂಜೆಯ ಬೆಳಕು, ನಡುಹಗಲಿನ ಬೆಳಕು—ಸೊಗಸಾಗಿ ನನ್ನ ಮೇಲೆ ಬಿದ್ದುವು. 'ವಿಷು' ಕಾಲವದು. ಆ ವಿಚಿತ್ರವನ್ನು ಕಂಡ ಕಾಡಾಡಿ ಕುಲದವರು, ನನ್ನನ್ನು ತಮ್ಮ ಕುಲ ಮಂದಿರವನ್ನಾಗಿ ಮಾಡಿಕೊಂಡರು. ಒಂದೆರಡು ಸಾವಿರ ವರ್ಷ ಕಳೆಯಲು ಇದನ್ನು 'ಸೂರ್ಯಮಂದಿರ' ವೆಂದೂ ಕರೆದರು. ಆಗಲೂ ಅರ್ಚಕರ ಬುದ್ಧಿ, ಭಕ್ತಿ, ಮಂಕುಗಳು ಇಂದಿನಂತೆಯೇ ಇದ್ದುವು."

"ಆದರೆ ಈ ಲಿಂಗರೂಪ ನಿನಗೆಂದು ಬಂದಿತು?"

"ನನ್ನನ್ನು ಇಲ್ಲಿಂದ ಹೊತ್ತು ಒಯ್ದಂದಿನಿಂದ."

"ವಿಚಿತ್ರ ಅನುಭವ ನಿನ್ನದು, ನೀನು ಏನು ಆಗಿಲ್ಲ-ಎನ್ನುವುದೇ ಕಠಿಣ. ಆದರೆ, ಎಲ್ಲ ಕಾಲಗಳಲ್ಲಿಯೂ ಪೂಜನೀಯನಾಗಿಯೇ ಇದ್ದೆ."

"ನಿನ್ನ ನಾಡಿನ ಧರ್ಮ ನನಗಷ್ಟು ಮಾನವನ್ನೂ ಕೊಡಿಸಿತು. ಆದರೆಬರಿಯ ಒಂದೆರಡು ಬಾರಿ ಮಾತ್ರ—ಇತರ ಅನುಭವಗಳೂ ನನಗೆ ಉಂಟಾಗಿದ್ದುವು."

"ಅವೇನು?"

"ಒಮ್ಮೆ ಘಟ್ಟದ ಮೇಗಣ ದೊರೆಗೂ ಕೆಳಗಣ ದೊರೆಗೂ ಉಗ್ರ ಕಾಳಗವಾಯಿತು. ಕಾಳಗದ ಕೊನೆಗೆ ಸಂಧಾನವಾಯಿತು. ಇಬ್ಬರೂ ಇಲ್ಲಿಯೇ ಬಂದು ಕಲೆತರು. ಕೊನಗೆ—ನನ್ನ ಗುಡಿಯನ್ನು ಅವರೊಳಗಣ ನಾಡಿನ ಗಡಿಯನ್ನಾಗಿ ಒಪ್ಪಿಕೊಂಡರು. ನಾನು ಗಡಿಯಕಲ್ಲಾದೆ! ಅದರಿಂದೊಂದು ತೊಂದರೆ ನನಗೆ ಬಂದಿತು. ಈ ದಾರಿಯಾಗಿ ಹೇರೆತ್ತಿನ ದಾರಿಯೊಂದು ಹೋಗುವಂತಾಯಿತು. ನನ್ನ ಮನೆಯನ್ನು ಆಗ ಸುಂಕದ ಮನೆಯನ್ನಾಗಿ ಮಾಡಿಬಿಟ್ಟರು. ಈಗ ಜನರಾಗಿ ನನಗೆ ಸುಂಕ ಕೊಡುತ್ತಿದ್ದರೆ, ಆಗ ನಾನಾಗಿ ಸುಂಕ ಕೇಳುವಂತೆ ಕಾಣಿಸಿತ್ತು."

"ಎಷ್ಟು ಕಾಲ ಹೀಗೆ ಸುಂಕದ ಕಟ್ಟೆಯಾಗಿದ್ದೆ?"

"ಒಂದು ನೂರು ವರ್ಷಕೂಡ ಇಲ್ಲ; ಮುಂದೆ ಈ ಎರಡು ರಾಜ್ಯಗಳೂ ಒಂದಾದವು. ನಾನು ದಾರಿಗರ ಮಜಲಿನ ಛತ್ರವಾದೆ. ಅದರಿಂದಲೇ ಒಂದು ದಿನ, ನಾನು ಸುಲಿಗೆಗಾರರ ತವರೂ ಆದೆ. ಅವರು ಇಲ್ಲಿನ ಮರೆ, ರಕ್ಷಣೆಯ ಸೌಕರ್ಯಗಳನ್ನು ಕಂಡು ಇಲ್ಲಿಯೇ ತಮ್ಮ ಬಿಡಾರ ಮಾಡಿಕೊಂಡರು. ಎಷ್ಟೋ ಬಾರಿ, ಹಣ ಕೊಡದೆ ಹೋದ ಹಾದಿಕಾರರನ್ನು, ನನ್ನ ಮೈಗೆ ಬಿಗಿದು, ಚಾಟಿಯಿಂದ ಚರ್ಮವನ್ನು ಸುಲಿದುದುಂಟು."

"ಅಯ್ಯೋ ಪಾಪ!"

"ಪಾಪ ಪುಣ್ಯಗಳೆಲ್ಲ ನನ್ನ ಪಾಲಿಗೆ ಒಂದೇ ಎನಿಸಿಬಿಟ್ಟಿದೆ. ಈ ಸ್ಥಳ, ಈ ಜನ್ಮ, ಇವೆಲ್ಲರಿಂದ ನಾನೀಗ ಒಂದು ನವೀನ ತೀರ್ಮಾನಕ್ಕೆ ಬಂದಿದ್ದೇನೆ. ಆ ತೀರ್ಮಾನಕ್ಕೆ ನಿನ್ನ ಒಪ್ಪುಗೆಯುಂಟೇ?"

"ಏನದು?........"

"ನನ್ನ ಕಲ್ಲಿನ ಬಾಳಿನಲ್ಲಿ ಕಂಡ ಸತ್ಯವೆಂದು ಅದನ್ನು ಹೇಳುತ್ತಿದ್ದೇನೆ— ನನಗೆ ನನ್ನ ಬಾಳ್ವೆಯಾದುದು ಸುಲಿಗೆಗಾಗಿ ಆಯಿತೆಂದು ತೋರುತ್ತದೆ. ಅಲ್ಲದೆ ಎಲ್ಲ ಬಗೆಯ ಸುಲಿಗೆಗಳು ಒಂದೇ ಸಮನಾದುವು ಎನಿಸುತ್ತಿದೆ."

"ಯಾವೆಲ್ಲ ಬಗೆಯ........"

"ಭಯ ಭಕ್ತಿಗಳ ಸುಲಿಗೆ, ಅಜ್ಞಾನದ ಸುಲಿಗೆ, ಬಲವಂತದ ಸುಲಿಗೆ ಇವೆಲ್ಲ. ಹೀಗಾಗಿ ನನಗೆ ಇನ್ನೊಂದು ಸುಲಿಗೆಮಾಡಲು ಮನಸಾಗಿದೆ ನಿನ್ನಿಂದ."

ನನ್ನಿಂದ ಸುಲಿಗೆಯೆನ್ನಲು ಭೀತಿಯಾಯಿತು. ಈ ತನಕ ಕತೆಯನ್ನು ಕೇಳಿಯೇ ನನಗೆ ಬೆದರಿಕೆಯಾಗಿತ್ತು. ಈಗಂತು ನಾನು ಬೆಪ್ಪಾಗಿಬಿಟ್ಟೆ.

"ಮತ್ತೇನಿಲ್ಲ, ನಿನ್ನಿಂದ ಒಂದು ಕಾವ್ಯದ ಸುಲಿಗೆಮಾಡಬೇಕು ಎಂಬಾಸೆ ನನಗೆ"

ಆಗ ನಾನಾಗಿ ತವಕಿಸಿ ಹೇಳಿದೆ—"ನಾನು, ನಿನ್ನ ವಿಚಾರವಾಗಿ ಗದ್ಯವನ್ನಾದರೆ ಗೀಚ ಬಲ್ಲೆ, ಪದ್ಯ ಹೊಸೆಯುವ ಶಕ್ತಿ ನನಗಿಲ್ಲವಲ್ಲ" ಎಂದು.

"ಹೋಗು; ಈಗೇನೋ ತಿಳಿದಂತೆ ಬರೆ; ಮುಂದೆ ಕಲ್ಕಾಡನನ್ನು ಸ್ಮರಿಸುತ್ತಿರು. ಕನ್ನಡಬ್ಬೆ ಒಂದು ದಿನ ನಿನ್ನನ್ನು ಸೇರಿ ಕಾವ್ಯದ ಗಬ್ಬ ವನ್ನು ಪ್ರೇರಿಸಿಯಾಳು."

"ನೀನು ನನಗೆ ಊರಿಗೆಹೋಗುವ ದಾರಿ ತೋರಿಸಿದರೆ, ಊರನ್ನು ಸೇರಿ ಕವನ ಬರೆಯುವ ಪ್ರಯತ್ನಮಾಡುತ್ತೇನೆ. ಅಂತು ನಿನ್ನ ಬಾಳಿ ನಲ್ಲಿ ನನಗೆ ಅನುತಾಪವಾಗಿದೆ; ನಿನಗಾಗಿ ಏನನ್ನಾದರೂ ಬರೆಯುವುದು ನಿಜ."

ಇದಾದ ಮರುದಿನವೇ ನಾನು ಸಶರೀರಿಯಾಗಿ ಊರಿಗೆ ಮರಳಿ ದೆನೆಂದೂ, ಹಾಗಿಲ್ಲವಾದರೆ ಈ ಲೇಖನವೇ ನನ್ನಿಂದ ಬರುತ್ತಿರಲಿಲ್ಲ ವೆಂದೂ ನೀವು ತಿಳಿದರೆ ಸಾಕು.



# ಓನ್ನಡೆದ ಬಾವುಟ

ಜನರೊಡನೆ ಮಾತಾಡಿ ಮನಸ್ಸನ್ನೆಲ್ಲ ಕೆಡಿಸಿಕೊಂಡಬಳಿಕ, ತಿರುಗಿ ಮೈಲಿಕಲ್ಲುಗಳೊಡನೆ ಮಾತನಾಡುವ ಆಸೆಯಾಗಿದೆ. 'ಮನುಷ್ಯರೊಡನೆ ಮಾತಾಡುವುದಕ್ಕೂ ಮಿಗಿಲಾದ ಸವಿ ಅದರಲ್ಲುಂಟೇ' ಎಂದು ಯಾರಾದರೂ ಕೇಳಿದರೆ 'ಇಲ್ಲ' ಎನ್ನಲಾರೆ. ಮನುಷ್ಯರ ಸವಿಮಾತುಗಳಲ್ಲಿ ಸವಿತನ ಹೆಚ್ಚು; ಸತ್ಯ ಕಡಮೆ. ಆದರೆ ನಾನು ಈ ತನಕ ಮಾತನಾಡಿಸಿದ ದುಸ್ತುಬಿನ್, ದೀಪಸ್ತಂಭದಂತಹ ಒಡವೆಗಳು ಎಂದೂ ಸುಳ್ಳಾಡಿದುದಿಲ್ಲ.

ಬಹು ವರ್ಷಗಳ ಹಿಂದೆ, ನನ್ನೊಂದು ನಾಡ ಭಿಕ್ಷಾಟಣೆಗಳಲ್ಲಿ ನನಗೆ ಇಂಥದೊಂದು ಸಂಸ್ಕೃತಿಯ ಮೈಲಿಕಲ್ಲಿನೊಡನೆ ಮಾತನಾಡುವ ಲಭ್ಯವಾಯಿತು. ಅಪೂರ್ವದ ಅನುಭವ, ಆಳವಾದ ಆತ್ಮವೃತ್ತ ಅದರದ್ದು. ಬಲ್ಲವರೆನ್ನುವಂತೆ ಅದರ ಮಾತಿನಲ್ಲಿ 'ಒಂದು ಒಳಮಾತು, ಅದರಲ್ಲೊಂದು ರಹಸ್ಯ, ರಹಸ್ಯದಲ್ಲೊಂದು ಮರ್ಮ, ಮರ್ಮದಲ್ಲೊಂದು ಒಡಪು, ಒಡಪಿನಲ್ಲೊಂದು ಸೂಳ್ನುಡಿ—ಎಂಬಿತ್ಯಾದಿ' ಇರುವಂತಿತ್ತು ಆ ವಿಷಯದ ಸಹಜತೆ. ಆ ಒಡವೆಯ ಮಾತುಗಳನ್ನು ಕೇಳಿ, ಹಿನ್ನಡೆದ ಅದರ ಜೀವವು, ಹೀಗೇ ಮುನ್ನಡೆದರೇನಾಗುವುದೋ— ಎಂದು ತೋಚಿತು. ಹೋಗಲಿ, ಬಳಸಿ ಮಾತನಾಡದೆ ವಿಷಯಕ್ಕೇನೆ ಬರುತ್ತೇನೆ.

ನಾನೋ-ಅದೊಂದು ಕಾಲದಲ್ಲಿ, ಬಟ್ಟೆ ಇಳಿಸಿದಂಥ ಬ್ರಹ್ಮಚಾರಿಯಾಗಿದ್ದೆ. ಗಾಂಧಿಸನ್ಯಾಸ, ಖಾದಿವಿನ್ಯಾಸ, ದೇಶಭಕ್ತಿಯ ಅಪಾರ ಧ್ಯಾಸ—ಇವುಗಳೇ ನನ್ನ ಹವ್ಯಾಸವಾಗಿದ್ದ ದಿನಗಳವು. ಗುಡ್ಡಗಳಲ್ಲಿ

ನನ್ನ ರಾಜ್ಯವಿತ್ತು, ಆಲದ ಮರದ ನೆರಳಳಲ್ಲಿ ನನ್ನ ಅರಮನೆಯಿತ್ತು. ಈ ಪರಿಸ್ಥಿತಿಯಲ್ಲಿ—ಸಾಬರ್ಮತಿಯಿಂದ ಅಲೆದಾಡುತ್ತ ಬಂದು, ಉತ್ತರ ಕರ್ನಾಟಕದ ಒಂದು ಹಾಳು ನಗರದಲ್ಲಿ ಕಾಲಿರಿಸಿದುದೂ, ಅಲ್ಲಿನ ಗವಿಯೊಂದನ್ನು ಸೇರಿದುದೂ ಸೋಜಿಗದ ಸಂಗತಿಯಲ್ಲ. ಆ ದಿನ ಬೆಳಗೆಲ್ಲ ತಿರುಗಾಡಿ ದಣಿದಿದ್ದೆ; ಆ ಹಾಳು ನಗರವನ್ನು ನೋಡಿ ಮರುಗಿದೆ; ಆಳವಾದ ಹಸಿವೆಯಿಂದ ಕಂಗಾಲಾಗಿದ್ದೆ. ಆಗ ನನ್ನ ಆಪ್ತ ನಿದ್ದಮ್ಮ (ಪುಷ್ಪ ಕನ್ನಿಪಗಿತ್ತಿ), ನನ್ನನ್ನು 'ಬಾ ಮಗುವೇ, ನನ್ನ ತೊಡೆಯ ಮೇಲೆ ವಿಶ್ರಾಂತಿಹೊಂಗು'—ಎಂದಳು. ಅದೇ ಗವಿಯಲ್ಲಿ-ಕುಳಿತೆ; ಒರಗಿದೆ; ನಿದ್ರಿಸಿಯೂ ಆಯಿತು.

ಎಚ್ಚರವಾದಾಗ ಗವಿಯಲ್ಲಿ ಕತ್ತಲು ಕವಿದಿತ್ತು. ಹೊರಗೆ ನರಿಗಳು ಊಳಿಡುತ್ತಿದ್ದುವು. ಹೊರಗೆ ಕತ್ತು ಹಾಕುವಂತಿರಲಿಲ್ಲ. ತಿಳಿಯದ ದಾರಿ, ಯಾರಿಲ್ಲದ ಊರು! ಒಳಗೆ-ಕತ್ತಲನ್ನು ಇದಿರಿಸಲಾರದೆ ಅಂಜಿ ಉರಿಯುತ್ತಿದ್ದ ಮಿಣಿ ಮಿಣಿ ದೀಪ. ಯಾರದೋ ಭಕ್ತಿಯು ಎಣ್ಣೆಯಾಗಿ, ಆ ಕಲ್ಲಿನೊಂದು ಹಣತೆಯಲ್ಲಿ ಉರಿಯುತ್ತಿತ್ತು. ನಾನು ನಿದ್ರೆ ಮಾಡಿದ ವೇಳೆ, ಯಾರೋ ಬಂದು ಅದನ್ನು ಉರಿಸಿ ಹೋಗಿರಬೇಕು, ಎಚ್ಚರವಾದಾಗ ಮಧ್ಯರಾತ್ರಿಯಾಗಿರಬಹುದು. ಆ ದೀಪದ ಬೆಳಕು ನನ್ನನ್ನು ಕೆಣಕುವ ಮೊದಲೇನೆ, ಗವಿಯಲ್ಲಿನ ಬಾವಲಿಗಳ ನಾತ ಕುಟುಕುತ್ತಿತ್ತು. ಅಷ್ಟಕ್ಕೇನೆ ನಸುಗಾಳಿಯೊಂದು ಸುಳಿದಾಡಿ, ಗವಿಯ ಮೂಲೆಯಲ್ಲಿ ಮಲಗಿದ್ದ ಭಂಗಿಯ ಚಿಲುಮೆಯ ಪ್ರೇತವನ್ನೂ ಹೊರತಳ್ಳಿತು. ಆ ದೀಪದಿಂದ ಭಂಗಿಯ ನಾತಗಳಿಂದ ನಾನಿದ್ದ ಗವಿಯು, ನನ್ನದಲ್ಲ ಎಂದು ತಿಳಿಯಿತು.

ನಾನು ದಣಿದು ಬಂದವನು,'ಅಲ್ಲೇನಿದ್ದುವು'ಎಂದು ಯೋಚಿಸದೆ ಮಲಗಿದ್ದೆ. ಈಗ ಎದ್ದು ನೋಡುತ್ತೇನೆ—ಎದುರಿನ ಗವಿಯ ಗೋಡೆ

ಯಲ್ಲಿ ಚಂದ್ರಕಾವಿಯ ಲೇಪನದಿಂದ ಕೆಂಪಡರಿದ ಆಂಜನೇಯನು— ನನಗೆ ವಿಮುಖನಾಗಿ ನಿಂತಿದ್ದ. ನನಗೆ ಗಾಬರಿಯಾಯಿತು. 'ಈತ ನನ್ನ ಮುಖವನ್ನು ನೋಡೆನೆಂದು ಏಕೆ ತಿರುಗಿಬಿದ್ದಿರುವ? ನಾನೇನು ಅಪರಾಧ ಮಾಡಿದ್ದೇನೆ'-ಎಂದು ದಿಕ್ಕು ತೋಚದಾದೆ. 'ಎಲ್ಲಿರುವೆ ತಂದೆ ಬಾರೋ' —ಎಂದು ವಿನಯವಾಗಿ ಅವನನ್ನೇ ಬೇಡಿದೆ. ಆದರೆ ನನ್ನಲ್ಲಿ ಅವನಿಗೆ ಕರುಣೆಬಾರದಾಯಿತು.

ಆಕಳಿಸುತ್ತ ಕುಳಿತೆ; ನನ್ನ ದಿವ್ಯ ಎಚ್ಚರದಲ್ಲಿ ಇನ್ನೊಂದು ಅಂಧಕಾರದ ಅನುಭವವಾಯಿತು. ಕತ್ತಲಲ್ಲಿ—ನನ್ನ ಹಸಿವೆ ಹಿಂಗಿಸುವ ದಾರಿಯೂ ಇಲ್ಲ. ಅದೇ ಹಸಿವಿನಿಂದ ನಿದ್ದೆಯ ಎರಡನೆಯ ಮುದ್ರಣಕ್ಕೂ ಅವಕಾಶವಿಲ್ಲ........ಹೀಗಾಗಿ ನಿರುದ್ಯೋಗಿಯಾಗಿ, ಆಂಜನೇಯನ ಮೊಗದ ಕಡೆಗೆ ಕಣ್ಣು ಮಿಟುಕಿಸುತ್ತ ಕುಳಿತೆ. ಆಗ ಆ ಗವಿಯಿಂದ ತುಂಬಿದ, ಭಂಗಿಯ ಹೊಗೆಯಿಂದಲೇ ನನಗೆ ಭಾವಸಮಾಧಿಯಾಗಿರಬೇಕು. ಆ ರಸನಿಮಿಷದಲ್ಲಿ ಕಣ್ಣು ತೆರೆದು ನೋಡಿದೆ. ಯಾರೋ ಕರೆದಂತೆ ಕೇಳಿಸಿತು. ಕರೆನುಡು, ಯಾವುದೋ ಸ್ವಾಮಿಯ ಬಳಿ ಒಂದು ಕೋಲಿನ ನಂಟುತನಮಾಡಿ ನಿಂತಿದ್ದ ಅರಿವೆಯ ಪತಾಕೆ. ಅದು ನೇರಾಗಿ ನನ್ನೊಡನೆ 'ನೀನು ಕನ್ನಡಮ್ಮನ ಕಂದನೇ' ಎಂದು ಕೇಳಿಯೂ ಬಿಟ್ಟಿತು. ಈಗಿನಂತೆ ನಾನು ಇಬ್ಬಟ್ಟಿ (Double-distilled) ಸಾಹಿತಿಯಾಗಿರಲಿಲ್ಲ. ಆದುದರಿಂದ ಆ ಮಾತಿನ ಅರ್ಥ ನನಗಾಗದೆ—'ಏನು' ಎಂದು ಕೇಳಿದೆ.

"ಅಲ್ಲ-ಹುಡುಗನಾಗಿ ಕಾಣುತ್ತೀ. ನೀನು ನಿದ್ದೆಯ ವೇಳೆ ನನ್ನನ್ನು ತುಳಿದೆ ಎಂಬುದರ ಜ್ಞಾನವಿದೆಯೋ? ಆ ಆಂಜನೇಯಸ್ವಾಮಿಯು ನಿನ್ನಿಂದ ಮುಖವನ್ನು ತಿರುಗಿಸಿ ನಿಂತುದೇಕೆಂದು ತಿಳಿಯುವೆ?"

"ಯಾರು — ಆ ಆಂಜನೇಯನೇ?"

"ಅಹುದು. ತಿಳಿಯದೇ ಏತಕ್ಕೆಂದು?"

"ಇಲ್ಲ"

"ನೀನು ನನ್ನನ್ನು ತಿಳಿವೂ ಅವಮಾನಿಸಿದೆಯೆಂದು. ಅವನ ಸಂಕೇತವು ನಾನು. ಅವನು ಹೆಸರಾಂತ ಮೊದಲ ಕನ್ನಡಿಗನಲ್ಲವೇ?"

"ಅಂದರೆ?"

"ಇದು ಯಾವ ನಾಡು ಎಂದು ನಿನಗೆ ತಿಳಿಯದೇ?"

"ಹಂಪಿ"

"ಅದೇ ಕಿಷ್ಕಿಂಧೆ. ಕನ್ನಡನಾಡು."

"ನನ್ನ ಮನೆಮಾತು ಕನ್ನಡ— ನನ್ನದು ದಕ್ಷಿಣಕನ್ನಡ. ಈ ತನಕ ನನ್ನದೇ ತಾಜಾ ಕನ್ನಡ ಎಂದು ತಿಳಿದಿದ್ದೆ. ಇದೂ ಕನ್ನಡವೇ? ಈತನು — ಮಾರುತಿರಾಯನೂ ನಮ್ಮ ಕನ್ನಡದ ಕುಲದವನು ಎನ್ನುತ್ತೀಯಾ?"

"ಯಾಕೋ ನೀನು ನಾಸ್ತಿಕನಾಗಿ ಕಾಣಿಸುವೆಯಲ್ಲ?"

"ನಾನು ನಾಸ್ತಿಕನಲ್ಲ. ಪ್ರತಿಸಂಜೆಯು ರಾಮಭಜನೆ ಮಾಡುತ್ತಿದ್ದೇನೆ. ಸಾಬರ್ಮತಿ ಆಶ್ರಮದ ಹಾಡುಗಳೆಲ್ಲವೂ ನನ್ನ ಬಾಯಿಗೆ ಬರುತ್ತಿವೆ. ಆಶ್ರಮ ಭಜನಾವಳಿಯ ಪ್ರತಿ ನನ್ನ ಕಿಸೆಯಲ್ಲೇ ಇದೆ.

"ಹಾಗಿದ್ದರೆ ನೀನು ಆಸ್ತಿಕ. ನಿನ್ನೊಡನೆ ಮಾತನಾಡಬಹುದು. ನನ್ನದೊಂದು ಬಯಕೆಯಿದೆ; ಅಭಿಲಾಷೆಯಿದೆ. ನಿಜವಾದ ಕನ್ನಡದ ಕಂದ ನೀನಾದರೆ ಅದನ್ನು ನೆರವೇರಿಸಿ ಕೊಡುವೆಯಂತೆ."

ಒಪ್ಪಿಗೆ ಕೊಡಲು ಮನವಿಲ್ಲದ ನಾನು, ಮಾತು ತಿರುಗಿಸಿದೆ. "ನಿನಗೂ ಅಭಿಲಾಷೆಯೇ? ನೀನಷ್ಟು ಅಭಿಲಾಷಿಯಾದರೆ, ಈ ಗವಿಯಲ್ಲಿ ಬಾವಲಿಗಳ ನಾತದಲ್ಲಿ, ಭಂಗಿಯ ಗುಂಗಿನಲ್ಲಿ ಇರುತ್ತಿದ್ದೆಯಾ? ಇದು ಸ್ಥಿತಪ್ರಜ್ಞರ ನಾಡು. 'ಎಂಬೀಶನ್' ಎನ್ನುತ್ತಾರಲ್ಲ, ಅದು ಉಳ್ಳವರು ಇರುವ ಸ್ಥಳವೇ?"

"ಇಲ್ಲಿದ್ದು ಅಭಿಲಾಷೆ ತೊಡಬಾರದೇನು?"

"ಏನೋ! ನಿನ್ನ ಅಭಿಲಾಷೆ ಏನೆಂದಾದರೂ ಹೇಳು."

"ನೀನದನ್ನು ನೆರವೇರಿಸಿ ಕೊಡುತ್ತೀಯಾ?"

"ಮುಂದಾಗಿ ನಾನು ಮಾತು ಕೊಡುವುದು ಸರಿಯಲ್ಲ, ಅದನ್ನು ನೀನು ಪಡೆಯುವುದೂ ಸಮವಲ್ಲ. ನೀನು ಏನೆಂದು ಹೇಳು— ನಾನು ಕೇಳುತ್ತೇನೆ."

ಆಗ ಆ ಅರಿವೆಕೋಲಿಗೆ ದುಃಖವಾಯಿತು. ತನ್ನ ಪೂರ್ವಜನ್ಮದ ಬಾಳನ್ನು ನೆನಸಿ ದುಃಖಬಂದು "ಹೋಗಲಿ-ನಿನಗೆ ನನ್ನ ವ್ಯಥೆಯನ್ನು ಕೇಳುವಷ್ಟು ತಾಳ್ಮೆಯಾದರೂ ಇದೆಯಲ್ಲ. ನೀನು ಇಷ್ಟು ಕೆಲಸವನ್ನಾದರೂ ಮಾಡು; ನನ್ನನ್ನು ನಾಳೆದಿನ ಇಲ್ಲಿಂದ ಒಯ್ದು, ಜನಸಂದಣಿಯಿರುವ ಯಾವ ಕನ್ನಡದ ಬೀದಿಯಲ್ಲಾದರೂ ಬಿಡು."

"ಅಷ್ಟನ್ನು ಮಾಡಬಲ್ಲೆ" ಎಂದು ಭರವಸೆಯಿತ್ತೆ. ನಿದ್ರೆ ಹೇಗೂ ಬರುವಂತಿಲ್ಲ. ಬರಿದೆ ಕುಳಿತಿರಲು, ಇದ್ದ ದೀಪವೂ ಆರಿಹೋಗಿ, ಕತ್ತಲು ತುಂಬಿ,ಎದೆಯಲ್ಲಿ ಭೀತಿ ನಟ್ಟಿತ್ತು. ಮಾತು ಕೇಳುತ್ತ ಮನಸ್ಸು ಮೈಮರೆತರೆ, ನನಗೆ ಅದೇ ಒಂದು ಲಾಭ ಎನಿಸಿತು. ಹಾಗಾಗಿ ಅದರ ಕತೆಯನ್ನು ಕೇಳಲು ಆತುರನಾಗಿ "ನೀನಾರು?" ಎಂದೆ.

"ಬಾವುಟ."

ನನಗೆ ಅದು 'ಬಾ — ಉಠ' ಎಂದು ಕೇಳಿಸಿತು. ಮಹರಾಷ್ಟ್ರ ದೇಶದಲ್ಲಿ ಸಂಚರಿಸಿ ಬಂದುವರ ಫಲವಿರಬೇಕು. ಹಾಗಾಗಿ "ಯಾರುನಿನ್ನನ್ನು ಏಳೆಂದರು?" ಎಂದು ಕೇಳಿದೆ.

"ಬಾವುಟ— ಎಂದರೆ ತಿಳಿಯದೆ? ಅದು ಶುದ್ಧ ಕನ್ನಡವಲ್ಲವೆ! ಪತಾಕೆ, ಪಳವಿಗೆ, ಕುಡಿ, ಧ್ವಜ— ಎಂಬೆಲ್ಲವೂ ನಾನೇ."

ನನಗಾಗ ಮಹಾಭಾರತದ ಕಪಿಧ್ವಜನ ನೆನಪಾಯಿತು. ಆದುದ

ರಿಂದ ಅನುಮಾನಗೊಂಡು, ಆಂಜನೇಯನಿಗೆ ಕೈತೋರಿಸಿ "ನಿನಗೂ ಅವನಿಗೂ ಸಂಬಂಧವೇ?" ಎಂದು ಕೇಳಿದೆ.

ಅದು ಒಮ್ಮೆಗೇ ರೇಗಿ "ನೀನೇ ಮಾತನಾಡು, ನಾನೇ ಸುಮ್ಮನಿರುತ್ತೇನೆ" ಎಂದಿತು.

"ಕ್ಷಮಿಸಪ್ಪ. ನಾನು ಗಾಂಧಿ ಲೆಕ್ಚರು ಮಾಡಿ, ದೇಶ ಅಲೆದವ. ಸುತ್ತಲಿನ ಪ್ರಪಂಚವೇ ನನ್ನ ಲೆಕ್ಚರು ಕೇಳಲು ಹುಟ್ಟಿರಬೇಕು ಎಂದು ತಿಳಿದವ. ಆ ಬಾಯಿ ಚಪಲದಿಂದ ಮಾತನಾಡಿದೆ. ನೀನು ಹಳೆಯ ಕಾಲದವ; ನನಗಿಂತ ಹೆಚ್ಚಾಗಿ ತಿಳಿದವನಿರಬೇಕು. ಹಳೆಯ ಕಾಲದ ರಾಟೆ, ಹೊಸ ಕಾಲದ ಗಿರಣಿಗಿಂತ ಶ್ರೇಷ್ಠವೆಂದು ಗಾಂಧಿಯವರೆನ್ನುವಂತೆ, ನಿನ್ನ ಹಳೆಯ ಕಾಲದ ಮಾತು ಶ್ರೇಷ್ಠವಿರಬಹುದು" ಎಂದೆ.

ನಾನು ಭಟ್ಟಂಗಿಯಾಗಲು ಅದು ತೃಪ್ತಿಗೊಂಡಿತು.

"ನಾನು ಅರಸರ ಕರದಲ್ಲಿ ನಲಿದವ!"

ನಾನು ಮೌನ.

"ನಂಬಲಾರೆಯಾ?"

"ಬರಿದೆ, ಕೇಳುವುದಿಷ್ಟೆ ನನ್ನ ಕೆಲಸ!"

"ಉತ್ತರ ದೇಶದ ಕ್ಷತ್ರಿಯನೊಬ್ಬನು ನನ್ನನ್ನು ಜನ್ಮಕ್ಕೆ ತಂದನು. ನನಗೆ ಬಣ್ಣ ಸವರಿ ಅರಸಿನ ಮಾಡಿ, ಚಿನ್ನದ ಕೋಲಿಗೆ ಸಿಕ್ಕಿಸಿ, ಮೇಲಕ್ಕೆ ಹಾರಿಸಿದನು. ಅರಮನೆಯ ಮೇಲೆ ನಾನು ಆಳಿದೆ, ಬಾಳಿದೆ."

"ಎಷ್ಟು ವರ್ಷಗಳ ಕಾಲ?"

"ಮರುಳೇ-ತಲಾಂತರಗಳ ಕತೆ ನನ್ನದು. ಆ ಅರಸನ ಕುಲದವರೆಲ್ಲರೂ ನನ್ನನ್ನು ಪೇಕ್ಷಿ ಮೆರೆದರು. ನನ್ನನ್ನು ಹಿಡಿದೇ, ಶೂದ್ರನಾದ ಅವನು ಕ್ಷತ್ರಿಯನೆನಿಸಿಕೊಂಡನು. ಅವನ ವಂಶ ಪರಂಪರೆಯವರು ನನಗಾಗಿ ಕಾದಾಡಿದವರು."

"ಮುಂದಕ್ಕೆ?"

"ಅವನ ವಂಶಜನೊಬ್ಬ ನನ್ನಲ್ಲಿ ಭಕ್ತಿಯಿಲ್ಲದಾದನು. ಆದರಿಂದ ಯವನರ ಕೈಯಲ್ಲಿ ಸೋಲನ್ನುಂಡನು. ಆದರೆ ಅವನ ಕುಲದವರು ನನ್ನನ್ನು ಅಡಗಿಸಿ ಒಯ್ದು, ಅರಣ್ಯಗಳಲ್ಲಿ ಪೂಜೆ ಮಾಡಿದರು."

"ಅನಂತರ?"

"ಆದರೆ ಅವರ ಭಕ್ತಿಯು ಆಳ ಸಾಗಲಿಲ್ಲ. ನನ್ನನ್ನು ಎತ್ತಿ ಮೆರೆಸುವ ತ್ರಾಣ ಅವರಿಗೆ ಬರಲೇ ಇಲ್ಲ. ನನಗೆ ಬಹುಕಾಲ ಕಾಡೇ ಗತಿಯಾಯಿತು. ಆದರೊಂದು ದಿನ ಒಬ್ಬ ಸನ್ಯಾಸಿಯ ಕರಕ್ಕೆ ಬಿದ್ದೆ. ಅವನು ನನ್ನನ್ನು ಹಿಡಿದುಕೊಂಡು ಸಂಚರಿಸಿದನು. ಅವನ ಬಟ್ಟೆಯ ಬಣ್ಣ ನನಗೂ ಬಂದಿತು. ಅದರಿಂದ ನನಗೆ ಮೊದಲಿಗೂ ಮೀರಿದ ಕೀರ್ತಿ ಬಂದಿತು.

"ನನ್ನಿಂದ ಅವನಿಗೆ, ಅರಸಿಗೂ ಮೀರಿದ ಮನ್ನಣೆ ದೊರೆಯಿತು ಹಿಂದೆ ಸಾವಿರಾರು ಜನರು ನನಗಾಗಿ ರಕ್ತ ಸುರಿಸಿದರೆ, ಈಗ ಲಕ್ಷಾಂತರ ಜನರು ನನ್ನ ಮುಂದೆ ಮಣಿದು ಭಕ್ತಿ ತೋರಿದರು. ನನಗಾಗಿ ಬ್ರಾಹ್ಮಣ ಸಂತರ್ಪಣೆಗಳಾದುವು; ಗುಡಿಗೋಪುರಗಳೆದ್ದುವು. ಆ ಸಾಧುವಿನ ಪರಂಪರೆಯುವರು ಬಹುಕಾಲ ನನ್ನನ್ನು ನಂಬಿದರು. ಅವರೆಲ್ಲರೂ ವಿರಾಗದ ಜತೆಗೆ ರಾಜಭೋಗಕ್ಕೂ ಭಾಗಿಗಳಾಗಿ ಸುಖಿಸಿದರು."

"ಹಾಗಿದ್ದರೆ ಇಲ್ಲಿಗೇಕೆ ಬಂದೆ?"

"ನಾನೇ ಬಂದುದಲ್ಲ. ವಿಧಿಯು ನನ್ನನ್ನಿಲ್ಲಿಗೆ ತಂದಿತು. ಕೊನೆಗೆ ಆ ಸಾಧುವಿನ ಪರಂಪರೆಯುವನೊಬ್ಬನು ನನ್ನನ್ನು ಗತಿಗೇಡಿಯಾಗಿ ಮಾಡಿದನು. ತಾನು ಕಾವಿಯುಟ್ಟೇ ಸಂಸಾರಸುಖವನ್ನು ಪಡೆಯಬಹುದಾಗಿದ್ದರೂ, ಒಬ್ಬ ತರುಣಿಯ ಮೋಹಕ್ಕೆ ಬಿದ್ದು ನನ್ನನ್ನು ಎಸೆದು ಬಿಟ್ಟು ತಾನು ಮಾಯವಾದನು."

"ಮುಂದೆ ಅವನ ಮಠ?"

"ಅರಮನೆಗಳು ಮುರಿದಂತೆ ಆ ದಿನ ಗುರುಮಠವೂ ಮುರಿಯಿತು. ನಾನು ಹಾದಿಬೀದಿಗಳಲ್ಲಿ ಮಣ್ಣು ಮುಕ್ಕುತ್ತ ನರಳುವಂತಾಯಿತು."

"ಇಲ್ಲಿಗೆ ಹೇಗೆ ಬಂದೆ?"

ಇಲ್ಲಿಗೆ ಬರುವುದಕ್ಕೇನೆ ಶತಮಾನಗಳು ಹಿಡಿದುವು. ದನ ಕಾಯುವ ಹುಡುಗರು ನನ್ನನ್ನು ಅಲ್ಲಲ್ಲಿ ಹಾರಿಸಿದರು. ನನ್ನನ್ನು ಹಿಡಿದು ಆಡಿದರು, ನಕ್ಕರು, ಆಟ ಮುಗಿಸಿ ಬಿಟ್ಟು ಹೋದರು.

"ಇರಬಹುದು. ಅದು ಮನುಷ್ಯ ಸ್ವಭಾವ. ಮಕ್ಕಳು--ಅವರಿಗೆ ಆಟದ ಬಳಿಕ ಆಟದ ಒಡವೆಯ ನೆನಪು ಬಂದೀತೇ?" ಹಿಂದೆ ನಿನ್ನನ್ನು ಹಿಡಿದವರೂ ಅಂತಹ ಹಿರಿಯ ಕೂಸುಗಳೇ!"

"ಆ ಸಾಧುಗಳು!"

"ಎಲ್ಲರೂ! ಅವರು ತಮಗಾಗಿ ನಿನ್ನನ್ನು ಹಿಡಿದರು..."

"ನಾನದನ್ನು ನಂಬಲಾರೆ. ಕೇವಲ ನನಗಾಗಿಯೇ ನನ್ನನ್ನು ಜನರು ಹಿಡಿದಾರು ಎಂಬ ಭರವಸೆ ನನಗಿದೆ."

"ಸರಿಯೆ, ನನಗೇನು! ಈಗ ನಿನ್ನಲ್ಲಿ ಹಳದಿ, ಹಸುರು, ಬಿಳಿಯ ಬಣ್ಣಗಳಿದ್ದಿದ್ದರಾದರೂ ನಾನು ನಿನ್ನನ್ನೆತ್ತಿ ಹಿಡಿಯುತ್ತಿದ್ದೆ. ದೇಶಭಕ್ತನಾಗಿ ಕೆಲವು ಘಂಟೆಗಳ ಕಾಲವಾದರೂ ಉದ್ಧರಿಸುತ್ತಿದ್ದೆ. ಕೊನೆಗೆ ನನ್ನ ಉಪನ್ಯಾಸಗಳ ಕಾಲದಲ್ಲಾದರೂ ತಬ್ಬಿ ಹಿಡಿಯುತ್ತಿದ್ದೆ."

"ನಿನ್ನ ಪರಿಹಾಸ್ಯ ಸಾಕು."

"ಹೋಗಲಿ, ನಿನ್ನ ಕತೆ ಹೇಳು."

"ಮುಂದೆ, ಊರೂರು ಅಲೆಯುವ ಕೊರವಂಜಿಯೊಬ್ಬನ ಕೈಗೆ ನಾನು ದೊರಕಿದೆ. ಅಂದಿನಿಂದ ಅವನ ಕಣಿಗಳೆಲ್ಲವೂ ಸತ್ಯವಾದುದನ್ನು

ಕಂಡು, ಅವನು ನನ್ನನ್ನು ನಂಬಿ ತಾನು ಹೋದಲ್ಲಿಗೆ ನನ್ನನ್ನು ಒಯ್ಯ ತೊಡಗಿದನು. ಆದರೇನು? ಹೋದಲ್ಲಿ—ತನ್ನ ಗೂಡಾರದ ಬಳಿ ನಡು ತ್ತಿದ್ದ. ಅದರ ಒಂದು ಕಡೆ ಅವನ ಕರಿಯ ಬೇಟೆನಾಯಿ, ಇನ್ನೊಂದು ಕಡೆ ಬಡ ನಾನು! ಆಗ ನನಗಾದ ವ್ಯಥೆ ಅಷ್ಟಿಷ್ಟಲ್ಲ. ಅರಮನೆ ಗುರು ಮನೆಗಳಲ್ಲಿ ಮೆರೆದ ನನಗೆ ಈ ಕೊರವಂಜಿಯ ಗೂಡಾರ ಕಾಯುವ ಗತಿ ಬಂದಿತೇ ಎಂದೆನಿಸಿತು."

"ಏನು ಅಂದಿನ ಏಳು!--ಏನು ಇಂದಿನ ಬೀಳು!"

"ಅಹುದು. ಅದರಿಂದ ನೊಂದು ಹಗಲೂ ಇರುಳೂ ಅತ್ತೆನು. ಮಳೆಯಲ್ಲಿ ನಡೆದೆನು. ಬಿಸಿಲಲ್ಲಿ ಒಣಗಿದೆನು. ಆದರೆ ಕೊರವಂಜಿಗೆ ನನ್ನಲ್ಲಿ ಗೌರವ ಬರಲಾರದು. ನನ್ನ ಬಲ ತನಗಿದೆಯೆಂಬ ಹೆಮ್ಮೆಮಾತ್ರ. ಅದರಿಂದ ಆತನು ಒಂದು ದಿನ ಮಿತಿಮೀರಿದ ಧೈರ್ಯದಿಂದ ಕಳವನ್ನು ಮಾಡಿ ಸಿಕ್ಕಿಬಿದ್ದನು. ಅವನ ಬೆನ್ನ ಹಿಂದೆ ನಾನು ಹೊರಡುವ ದಿನ ಬಂದಿತೇ — ಎಂದೆನಿಸಿತು."

"ಪ್ರಾಸ ಸರಿಯಾಯಿತು."

"ಏನು ಪ್ರಾಸ............?"

"ಅರಮನೆ, ಗುರುಮನೆ, ಕೊನೆಗೆ ಸೆರೆಮನೆ!"

"ಅವನನ್ನು ಹಿಡಿದ ಪೋಲೀಸರು ಚೆನ್ನಾಗಿ ಗದರಿಸಿದುದರಿಂದ ನನ್ನನ್ನು ರೇಗಿ ಎಸೆದನು. ತಾನಂತು ಸೆರೆಮನೆಗೇ ತೆರಳಿದನು. ತಿರುಗಿ ಬೀದಿ, ಹಾದಿಗಳಲ್ಲಿ ತೊಳಲುವ ಪರಿ ನನಗೆ ಬಂದಿತು. ಕೊನೆಗೊಂದು ದಿನ ಯಾವನೋ ಒಬ್ಬ ಭಂಗಿಮುಕ್ಕ ಬೈರಾಗಿಯು ನನ್ನನ್ನು ಉದ್ಧರಿಸಿ ಇಲ್ಲಿಗೆ ತಂದನು. ಆದರೆ ತನ್ನ ಭಂಗಿಯ ಗುಂಗಿನಲ್ಲಿ ನನ್ನನ್ನು ಎತ್ತು ವುದೂ ಉಂಟು; ಬೀಳಿಸುವುದೂ ಉಂಟು. ಇಲ್ಲಿಗೆ ಬಂದಂದಿನಿಂದ — ಈ ನಾಡು ನನ್ನದೆಂದು ನನಗೆನಿಸಿದೆ. ಹಂಪೆಯ ಈ ಗುಹೆಗೆ ಬಂದಿ

ಶುವ ನನಗೆ, ಕನ್ನಡವೇ ನನ್ನ ನಾಡು ಎನಿಸಿಬಿಟ್ಟಿದೆ."

"ಹಿಂದೆ ಉತ್ತರ ಹಿಂದುಸ್ಥಾನದಲ್ಲಿದ್ದೆ—ಎಂದೆಯಲ್ಲ."

"ಆಗ ಅದೂ ಕನ್ನಡ ನಾಡಾಗಿತ್ತು."

"ಎಷ್ಟು ಕಾಲದ ಹಿಂದೆ?"

"ಸಾವಿರಾರು ವರ್ಷಗಳ ಹಿಂದೆ."

"ಆಗ ಕನ್ನಡವಿದ್ದಿತ್ತೇ?"

"ಆ ಅಂಜನೇಯನನ್ನು ಕೇಳು—'ನೀನು ಕನ್ನಡಿಗನಲ್ಲವೇ' ಎಂದು. ಅವನ ಮೊದಲ ಕಣ್ – ನುಡಿಯೇ, ಕನ್ನಡಿಯಾಗಿ ಕನ್ನಡ ವಾಯಿತು!"

ನನಗೆ ಇತಿಹಾಸ, ಭಾಷಾ ಶಾಸ್ತ್ರಗಳೆರಡರ ಅನುಭವವೂ ಸಾಲ ದಿತ್ತು. ಆದುದರಿಂದ ಅಭಿಮಾನ ಉಂಟಾಗಲಿಲ್ಲ. ಈಗಾದರೆ, ನಮ್ಮ ಹಿರಿಯರು, ಈಜಿಪ್ಟಿನ ಅಕ್ನಾಟನನೂ; ಯಾದವಕೃಷ್ಣನೂ, ಕನ್ನಡಕ್ಕೂ ಪೂರ್ವದ ಕನ್ನಡಿಗರೆಂದು ಹೇಳುವುದನ್ನು ಕೇಳಿ ಅಭಿಮಾನ ತಾಳುತ್ತಿದ್ದೆನೋ ಏನೋ. ನನ್ನ ಆಗಿನ ದಿನಗಳಲ್ಲಿ ನನ್ನಲ್ಲಿ ಕೇವಲ ರಾಷ್ಟ್ರಭಕ್ತಿ, ಹಿಂದೀ ಹುಚ್ಚು, ತಕಲಿ ನೆಚ್ಚುಗಳೇ ತುಂಬಿಕೊಂಡಿದ್ದುದರಿಂದ, ಈ ಶೋಧನೆಯು ಅಷ್ಟೊಂದು ಅಚ್ಚರಿಯನ್ನು ಹುಟ್ಟಿಸಲಿಲ್ಲ.

ಅದು ಮಾತನ್ನು ಮುಂದುವರಿಸಿತು. "ನೀನು ನನಗಾಗಿ ಕನ್ನಡ ಸಾಹಿತಿಯಾಗುವಿಯಾ? ಅದೇನು ಅಷ್ಟೊಂದು ಕಷ್ಟದ ಕೆಲಸವಾಗಿಲ್ಲ. ನಿನ್ನಲ್ಲಿರುವ ಹೆಚ್ಚಾದ ಕೆಚ್ಚನ್ನು, ಹುಚ್ಚಾಗಿ ಹರಿಸಿ, ಅದನ್ನು ಅಚ್ಚಿಗೆ ಕೊಟ್ಟರಾಯಿತು. ನೀನು ಕೊಡುವ ಲೆಕ್ಚರನ್ನು ಬರೆದು ಅಚ್ಚಿಸಿದರೂ ಆಯಿತು."

ತುಸು ಸಮಯದ ಮೊದಲು ನಾನು ಭಯಂಕರ ಪತ್ತೇದಾರಿ ಕತೆಯೊಂದನ್ನು ಬರೆದು ಅಚ್ಚುಗಾರನ ಋಣಕ್ಕೆ ಬಿದ್ದ ನೆನಪಾಯಿತು.

ಅಲ್ಲದೆ ಬರೆದರೆ ಓದುವವರಿಗಿಂತ, ಕಿರುಚಿದರೆ ಕೇಳುವವರ ಸಂಖ್ಯೆ ಹೆಚ್ಚೆಂಬುದರಿಂದ "ಅಚ್ಚಿನ ಸಾಹಿತ್ಯ ನನಗೆ ಬೇಡ" ಎಂದೆ. "ಸದ್ಯವಂತು ನಾನು ಬಿದ್ದ ಭಾರತಾಂಬೆಯುನ್ನು ಎತ್ತಬೇಕೆಂಬುವವನು. ಈ ತಕಲಿ ಯನ್ನು ತಿರುಗಿಸಿಯೇ ಬ್ರಿಟನನ್ನು ಬಿರುಗಾಳಿಗೆ ಗುರಿಮಾಡುವವನು" ಎಂದೆ.

"ಮರುಳೇ, ನಾನು ಅನುಭವಿಕ. ರಾಜಕೀಯುವನ್ನೂ ಕಂಡವ, ಮತ ಅರಿತವ. ಆದುದರಿಂದಲೇ ನೀನು ಸಾಹಿತಿಯಾಗು ಎಂದೆನು. ಕನ್ನಡ ದೇವಿಗೊಂದು ಗುಡಿಕಟ್ಟಿ, ನನ್ನನ್ನದರ ಕುಡಿಯ ಮೇಲಿರಿಸು."

"ನನಗೇನೆ ಗುಡಿಯಿಲ್ಲ, ಗೂಡಾರವಿಲ್ಲ, ನಿನಗೇಕೆ ಗುಟಿಕಟ್ಟು ತ್ತೇನೆ? ಬಾಯಿ ನುಡಿಗೇಕೆ ಗುಡಿ ಕಟ್ಟುವೆ?"

"ಕೇವಲ ಪರೋಪಕಾರಕ್ಕಾಗಿಯಾದರೂ ಹಾಗೆ ಮಾಡಲಾರೆ ಯಾ?"

"ನನಗೆ ವೆಚ್ಚವಾಗದ ಉಪಕಾರ ಎಷ್ಟನ್ನೂ ಮಾಡುವೆ."

"ಮರುಳೇ – ವೆಚ್ಚಕ್ಕೆ ಹಿಂದಾಗಬೇಡ! ನನ್ನನ್ನು ಎತ್ತಿ ಹಿಡಿದರೆ ನಿನಗೆ ಕೀರ್ತಿ ಬಂದೀತು, ಮನ್ನಣೆ ಸಂದೀತು."

"ಇಗೋ ನಾನು ದೇ. ಭ. ನನಗೆ ನಿನ್ನ 'ನೆರ್‍ರೋ ಪೇಟ್ರಿಯಾಟಿ ಸಮ್' ಸಲ್ಲದು."

"ಹೋಗಲಿ, ನನ್ನನ್ನು ಈ ಭಂಗಿಮುಕ್ಕನ ಗವಿಯಿಂದಲಾದರೂ ತಪ್ಪಿಸು."

"ಯಾವ ಅಭಿಲಾಷೆಗೆಂದು ಇಲ್ಲಿಂದ ಹೊರಕ್ಕೆ ಹೊರಡುತ್ತೀ ಯಾ?"

"ಬಾಳುವ ಆಸೆಗಾಗಿ. ಹಿಂದೆ ಮೆರೆದಂತೆ ಆಳಿಮೆರೆಯಬೇಕೆಂದು. ಇಲ್ಲೇ ನಿಂತು ವಿದ್ಯಾರಣ್ಯರು ಕನ್ನಡ ರಾಜ್ಯ ಕಟ್ಟಿದರಲ್ಲ. ಅಂಥವರಾರಾ

ದರೂ ನನ್ನನ್ನು ನಂಬಿದರೆ ನನ್ನ ಆಸೆ ನೆರವೇರಿತೆಂದು ಹಂಬಲಿಸುವೆ."

"ನಾನು ಅಷ್ಟೆಲ್ಲ ಮಾಡಲಾರೆ."

"ನಿನಗೆ ನಿನ್ನ ತಾಯಲ್ಲಿ ನಂಬಿಕೆಯಿಲ್ಲವೇ"

"ಈಗ ತತ್ಕಾಲಕ್ಕೆ ನನ್ನ ತಾಯಿ ಭಾರತಾಂಬೆ."

"ನನಗೆ ದೇಶಮಾತೆ, ಧರ್ಮಮಾತೆಯರ ನೆಚ್ಚು ಸಾಲದು. ಹಿಂದೆ ಅರಸರೂ, ಸಾಧುಗಳೂ ಆ ಕೆಲಸವನ್ನು ಮಾಡಿ, ಕೊನೆಗೆ ನನ್ನನ್ನೇ ನಿರ್ಗತಿಕನನ್ನಾಗಿ ಮಾಡಿದರು."

"ಇನ್ನಾರ ಮೇಲೆ ನಿನಗೆ ನಂಬಿಕೆ?"

"ನೀನು ನನಗಾಗಿ ನುಡಿಯಬ್ಬೆಯೊಬ್ಬಳನ್ನು ಹುಟ್ಟಿಸಬಲ್ಲೆ ಯಾದರೆ!"

"ನುಡಿಯಬ್ಬೆ!"

"ಅಬ್ಬಾ ನುಡಿಯೇ! ನುಡಿಯಬ್ಬೆ ಎಂಬ ಬೊಬ್ಬೆ ಹೊಡೆದರೆ ಸರಿಯೆ."

ಆಗ ಬೆಳಗಾಗಿತ್ತು. ನನಗೆ ಹಸಿವಿನಿಂದ ಹೊಟ್ಟೆಕಡಿಯುತ್ತಿತ್ತು. "ನಾನು ಹೋಗುತ್ತೇನೆ. ನನಗೆ ವಾದದ ಇಷ್ಟವಿಲ್ಲ. ಬರುವೆಯಾದರೆ ಒಯ್ಯುತ್ತೇನೆ. ಎಲ್ಲಾದರೊಂದು ಜನಸಂದಣಿಯಿರುವ ಓಣಿಯಲ್ಲಿ ಬಿಟ್ಟುಬಿಡುತ್ತೇನೆ. ಆದರೆ ನಿನ್ನ ಇತರ ಆಸೆಗಳಾವುವೂ ನನ್ನಿಂದ ಕೈಗೂಡವು."

ಆಗ ಆ ಬಾವುಟವು ನಿರಾಶೆಗೊಂಡರೂ, ಬಿಡುಗಡೆಗಾಗಿ ಕಾದಿದ್ದುದರಿಂದ 'ಆಗಲಿ' ಎಂದಿತು. ನಾನು 'ಬಾ-ಉತ' ಎಂದೊಡನೆ ಬಂದು ನನ್ನ ಬೇಗನ್ನು (Bag) ಸೇರಿತು. ನಾನು ಅದರೊಡನೆ ಹಂಪಿಯನ್ನು ಬಿಟ್ಟು ಹೊಸಪೇಟೆ ಸೇರಿದೆ. ನನ್ನ ಊಟ ಉಪಚಾರಗಳಾದ ಬಳಿಕ ರೈಲಿನಲ್ಲಿ ಪಯಣ ಹೊರಟೆ. ಬಂಡಿಯಲ್ಲಿ ತಾಸುತಾಸುಗಳ ತನಕ, ಆ

ಬಾವುಟವು ಹೇಗೆ ನನ್ನ ಚೀಲದಲ್ಲಿನ ತಕಲಿ, ಹತ್ತಿಗಳೊಡನೆ ಕಾಲಕಳೆಯಿತೊ ತಿಳಿಯದು.

ನಾನು ಹಗಲು ರಾತ್ರಿ ಪಯಣಮಾಡಿ, ಕಡೂರಿಗೆ ಬಂದೆ. ಬರುವಾಗ ರಾತ್ರಿ ಮೀರಿತ್ತು. ಎದ್ದು ನೋಡಿದೆ. ರೈಲುಬಂಡಿ ನಿಂತಿತ್ತು. ಆದರೆ ನನ್ನ ಬೇಗು (Bag) ಮಾಯವಾಗಿತ್ತು.

ನನಗೆ ವ್ಯಥೆಯಾಯಿತು. ತಕಲಿ, ಹತ್ತಿಗಳನ್ನಾದರೂ ತಿರುಗಿ ಕೊಳ್ಳಬಹುದು.'ಈ ಬಾವುಟದ ಗತಿಯೇನು'ಎಂದು ತೋಚಿತು.ಆದರೆ ಅದರ ಬಾಳುವ ಹಿರಿಯಾಸೆಯನ್ನು ಕಂಡು ನಾನೇ ಸಮಾಧಾನ ತಾಳುವೆ.'ಈ ತನಕ ಜನರ ರಕ್ತ, ಭಕ್ತಿಗಳನ್ನು ಕೊಂಡು ಬಾಳಿದ ಅದು, ಇನ್ನು ಮುಂದೂ ಹಾಗೆಯೇ ಬಾಳೀತು. ಎಲ್ಲಾದರೊಂದು ಮಠ ಕಟ್ಟಿಕೊಂಡು ತಿರುಗಿ ತಲೆಯೆತ್ತೀತು' ಎಂದೆನಿಸಿತು.



# ಸುಡುಗಾಡು ಸಿದ್ಧ

ನನ್ನ ಹಿಂದಿನ ಅಲೆದಾಟಗಳಲ್ಲೊಮ್ಮೆ ಮೈಸೂರಿನ ಹೆಸರಾದ ಒಂದು ನಗರದಲ್ಲಿ ಕೆಲವು ತಿಂಗಳ ಕಾಲವನ್ನು ಕಳೆದಿದ್ದೆ. ಅದೇ ಬಗೆಯಲ್ಲಿ ನನಗೆ ಹಲವು ಹಂಪೆಕೊಂಪೆಗಳ ನಿವಾಸ, ಲಾಭವಾಗಿತ್ತು. ಅಂದಿನ ಆ ದಿನಗಳಲ್ಲಿ ನನಗೆ ನಗರವಾಸದ ಮಮತೆಗಿಂತ ಮಿಗಿಲಾಗಿ ನಗರಾಂತ್ಯವಾಸದ ಲಾಲಸೆಯು ಹೆಚ್ಚಾಗಿತ್ತು. ಆಗಿನ ದಿನಗಳಲ್ಲಿ ನನ್ನ ಮಧ್ಯಾಹ್ನದ ಊಟವಾಯಿತೆಂದರೆ, ಕೆಲವು ಪುಸ್ತಕಗಳನ್ನು ಕಂಕುಳಲ್ಲಿ ತುರುಕಿಕೊಂಡು, ಅಪರಾಹ್ನದ ಉರಿಬಿಸಿಲಿನ 'ಅಲ್ಟ್ರಾವಾಯಲೆಟ್' ಕಿರಣಗಳೊಂದೂ ವ್ಯರ್ಥವಾಗದಂತೆ ಹೊರಕ್ಕೆ ವಿಹಾರಕ್ಕೆ ಹೊರಡುವುದು. ನನ್ನ ಚಾಳಿಯಾಗಿತ್ತು. ಎಲ್ಲಾದರೊಂದು ಸಂದಿಯನ್ನು ಸೇರಿ—ಏಕಾಂತವಾಗಿ ಕುಳಿತು ಓದುವುದೋ, ಸ್ಫೂರ್ತಿಗಳಿಸಿ ಬರೆಯುವುದೋ ಈ ವಿಹಾರಗಳ ಹೇತು. ಪೇಟೆಯಲ್ಲೇ ವಾಸವಾಗಿದ್ದು ಸಮಯ ಕಳೆಯುವ ನಮ್ಮಂತಹರಿಗೆ, ಪೇಟೆಗೆ ಸಮೀಪವಾಗಿ ಏಕಾಂತಕ್ಕೊಂದು ನಿರ್ಜನಾರಣ್ಯ ದೊರೆಯುವುದು ಶಕ್ಯವೇ? ದೊರಕದೆ ಹೋದರೂ ದೊರಕಿಸಬೇಕೆಂಬ ಹಂಬಲ ನನ್ನದು. ನಾನು ಹಿಂದೆ ಸೂಚಿಸಿದ ನಗರದಲ್ಲಾದರೂ ನನ್ನ ಯತ್ನ ಆ ವಿಷಯದಲ್ಲಿ ನಡೆಯಿತು. ಅಲ್ಲಿಗೆ ಹೋಗಿ ಸೇರಿದ ಮೊದಲ ದಿನವೇ ಮಧ್ಯಾಹ್ನದ ಊಟವನ್ನು ಪೂರೈಸಿ ಊರಹೊರಕ್ಕೆ ಸಂಚಾರಕ್ಕೆಂದು ಮೂಡು ದಿಕ್ಕಿಗೆ ಹೋಗುವ ಒಂದು ಹೆದ್ದಾರಿಯನ್ನು ಆರಿಸಿ ಹೊರಟೆ. ನಡೆನಡೆದು ನಗರ ಕಳೆಯಿತು; ರೈಲು ದಾರಿ ದಾಟಿತು; ಹೆದ್ದಾರಿ ಮತ್ತೂ ಮುಂದುವರಿಯಿತು. ಹಾದಿ ಹೋದಲ್ಲೆಲ್ಲಾ ನಾನೂ ಹೋದರೆ ಅಂಧಶ್ರದ್ಧೆಯಾದೀತೆಂದು,

ತುಸು ಹೊತ್ತಿನಲ್ಲೇ ನಿಂತು ಬಿಟ್ಟೆ. ಹಾದಿ ನನ್ನನ್ನು ಧಿಕ್ಕರಿಸಿ ಮುಂದು ವರಿಯಿತು. ನಾನು ಅದನ್ನು 'ಎಡಕ್ಕರಿಸಿ' ಬಲಗಡೆಗೆ ಹೊರಳಿದೆ. ನನಗೆ ಬೇಕಾದ ನಿರ್ಜನಾರಣ್ಯ ಕಾಣಿಸಿತು. ನಾನು ಬಂದಿಳಿದ ತಾವು, ಆ ನಗರದ ಜನರು ಕ್ರಮೇಣ ನಿರ್ಜನರಾಗುವ ತಾವು; ಊರಿನ ಸುಡುಗಾಡು.

ಅಲ್ಲಿ ಒಂದು ಅಶ್ವತ್ಥ; ಇನ್ನೊಂದು ಗೋಳಿಮರ. ಎರಡೂ ಬೃಹದಾಕಾರವನ್ನು ತಾಳಿ, ಸಾಲಕೊಟ್ಟವರಂತೆ ತೋಳುಗಳನ್ನು ನೀಡಿ ನಿಂತಿದ್ದುವು. ಮರದ ಕೆಳಗೆ ತಂಪು ತುಂಬಾ ಕಾಣಿಸಿತು. ಆದರೆ ನಾನು ಯಾವ ಮರದ ನೆರಳಿನಲ್ಲಿ ವಿರಮಿಸಲಿ ಎಂಬ ಸಂದಿಗ್ಧ ಬಂದಿತು. ಎರಡೂ ಪ್ರಾಚೀನ ಜೀವಿಗಳು. ಎರಡೂ ಪೌರಾಣಿಕವಾದ ಅಧಿಕಾರದಿಂದ ನನ್ನನ್ನು ಕರೆಯುತ್ತಿದ್ದುವು. ಎರಡೂ ನೂರಾರು ಮೃಗಪಕ್ಷಿಗಳಿಗೆ ಆಶ್ರಯಕೊಟ್ಟಿದ್ದು, ಎರಡರ ಪೊಟರೆಗಳಲ್ಲೂ ಹಾವು, ಅರಣೆಗಳು ಇರಬಹುದಿತ್ತು. ಎರಡರ ಕೊಂಬೆ ರೆಂಬೆಗಳ ಮೇಲೆಯೂ ಕಾಕ, ಪಿಕಾದಿಗಳ ಆವಾಸವಿದ್ದಿರಬಹುದು. ಏನೋ ಬಿಸಿಲು ಅತಿಯಾಗಿದ್ದುದರಿಂದ ಅವುಗಳ ಧ್ವನಿ ಇಂಗಿತ್ತು. ನಾನು ದಾರಿಗಾಣದೆ ಅನಿಶ್ಚಿತತೆಯಿಂದ ಎರಡಕ್ಕೂ ನಡುವೆ ಬಂದು ನಿಂತೆ. ನನ್ನ ಮೈಮೇಲಿನ ಕಂದು ಬಣ್ಣದ ಶಾಲನ್ನು ಎಲ್ಲಿ ಹರವಲಿ ಎಂದು ಮತ್ತೆ ಯೋಚಿಸತೊಡಗಿದೆ. ಕಟ್ಟಕಡೆಗೆ ನನ್ನ ಮತವು-ಅಶ್ವತ್ಥ ವೃಕ್ಷಕ್ಕೇನೆ ಸಂದಿತು. ಆ ಗೋಳಿಯ ಮರದ ಬುಡದಲ್ಲಿ ಕಾಣದ್ದೊಂದು ವಿಶೇಷ ಇದರ ಬುಡದಲ್ಲಿ ಅಡಗಿದ್ದುದೇ ಅದರ ಕಾರಣ. ಅಲ್ಲಿ ಹಲವು ತುಂಡು ತುಣುಕು ಕಲ್ಲುಗಳದೊಂದು ರಾಶಿಯಿತ್ತು. ಆ ರಾಶಿಯ ಮೇಲೆ ಭವ್ಯವಾಗಿ ಸಮ್ಮೇಳನಾಧ್ಯಕ್ಷನಂತೆ ಪವಡಿಸಿದ ಹಿರಿಯ ಗುಂಡು ಕಲ್ಲೊಂದು ಕಾಣಿಸಿತು. ಅದಕ್ಕೆ ಆಗಾಗ ತೈಲಾಭ್ಯಂಜನ ನಡೆಯುತ್ತಿದ್ದಂತೆಯೂ ತೋರಿತು. 'ಹಾಗಿದ್ದರೆ ಈ ಸುಡುಗಾಡು ಸಿದ್ಧನ ಆಶ್ರಯದಲ್ಲೇ ನನ್ನ ಸ್ಫೂರ್ತಿ

ಪ್ರೇರಣೆಗೊಳ್ಳಲಿ' ಎಂದು ಆ ಗುಂಡುಕಲ್ಲಿನ ಮುಂಗಡೆಯೇ ಹೋಗಿ ನನ್ನ ಶಾಲನ್ನು ಹಾಸಿದೆ. ನನ್ನ ಕಂಕುಳೊಳಗಿನ ದಪ್ತರವನ್ನು ಧಸ ಕ್ಕೆಂದು ಎದುರಿಗೆ ಕೆಡವಿದೆ.

ಆ 'ಪ್ರಶಾಂತ, ಗಂಭೀರ, ನಿರ್ಜನ'—ಇತ್ಯಾದಿ ಇತ್ಯಾದಿಯಾಗಿ ಪತ್ತೇದಾರಿ ಕಾದಂಬರಿಗಳಲ್ಲಿ ಕಾಣಿಸುವ ವರ್ಣನೆಗೆ ಯೋಗ್ಯವಾದ ಆ ಸ್ಥಳದಲ್ಲಿ ನಾನು ಬಂದು ನಿಂತೊಡನೆಯೇ ಇಲ್ಲಿ ಕುಳಿತು ಬರೆಯೋಣವೇ, ಒರಗಿ ಓದೋಣವೇ, ಮಲಗಿ ಗೊರೆಯೋಣವೇ ಎಂಬ ವಿವಿಧ ಪ್ರಶ್ನೆಗಳುಂಟಾಗಿ, ಕೊನೆಯು ಕರೆಯೇ ಪ್ರಶಸ್ತವೆಂದು ತೋಚಿ, ತಲೆಗೆ ಕೈಕೊಟ್ಟು ಮಲಗಿಕೊಂಡೆ. ದಿಂಬಿನ ಎತ್ತರ ಸಾಲದೆಂದು, ಓದಲು ತಂದಿದ್ದ ಪುಸ್ತಕವನ್ನು ಸೇರಿಸಿಕೊಂಡೆ. ಇವುಗಳಿಂದಾಗಿ ಬಲು ಸುಖ ವಾದ ನಿದ್ರೆ ಪ್ರಾಪ್ತಿಸಿತೆಂದು ಹೇಳಬೇಕೇ? ಇದೇ ಸ್ಥಳ ಮುಂದೆ ಹಲವು ದಿವಸಗಳ ವರೆಗೂ ನನ್ನ ವಿಶ್ರಾಂತಿ ಮಂದಿರವೆನಿಸಿತು. ನಾನು ಅಲ್ಲಿಗೆ ಬಂದಾಗಲೆಲ್ಲ ಇದೇ ರೀತಿಯಿಂದ ನನ್ನ ನಿತ್ಯದ ಕಾರ್ಯಕ್ರಮವು ನಡೆ ಯುತ್ತಿತ್ತು. ಮೊದಲಿಗೆ ಶಯನ—ಎಚ್ಚರವಾದ ಬಳಿಕ, ಬುದ್ಧಿಗೆ ತೋಚಿದರೆ, ಓದು—ಸ್ಫೂರ್ತಿ ಬಂದರೆ ಬರಹ. ಆದರೆ ಈಗಿನ ನನ್ನ ನೆನಪಿನಿಂದ ಹೇಳುವುದಾದರೆ ಸ್ಫೂರ್ತಿ ಬಂದು ನಾನು ಬರೆದ ಯಾವ ಬರಹವೂ ಅಲ್ಲಿಂದ ಹೊರಬೀಳಲಿಲ್ಲ. ಒಂದು ರೀತಿಯಿಂದ ಅದೇ ಸಮಂಜಸ. ಬ್ರಹ್ಮನು ಬರೆದ ಬರಹವನ್ನು ಶಿವನು ಅಳಿಸುವ ಆ ಭೂಮಿ ಯಲ್ಲಿ ಬಡ ಸಾಹಿತಿಯೊಬ್ಬನು ಕುಳಿತು ಎಷ್ಟು ತಾಳಬಲ್ಲ ಬರವಣಿಗೆ ಯನ್ನು ಅಲ್ಲಿ ಬರೆದಾನು?

ಆದರೆ—ನನ್ನ ನೆನಪಿನಲ್ಲಿ, ಬರೆದುಕೊಂಡ ಒಂದು ಸಂಭಾಷಣೆ ಯನ್ನು ಮಾತ್ರ ಇಲ್ಲಿ ಬರೆಯುತ್ತಿದ್ದೇನೆ-ಅದೂ ಇಷ್ಟು ಕಾಲದ ಬಳಿಕ. ಆ ಸಂಗತಿ ನಾನು ಅಲ್ಲಿ ಹೋಗಿ ಮಲಗಿ ನಿದ್ರಾಸುಖವನ್ನು ಸವಿದ

ಮೊದಲನೆಯ ದಿನವೇ ಪ್ರಾಪ್ತಿಸಿದುದು. ಪ್ರಾಯಶಃ ಪ್ರಕಾಶಕರಿಲ್ಲದೆ ಅಂದಿನ ಸ್ಫೂರ್ತಿ ಇಷ್ಟೊಂದು ದಿನ ತಡೆದು ನಿಂತು ಇಂದು ಬುಗ್ಗೆಯೊಡೆಯಿತೋ ಏನೋ?

ನಾನು ಮಲಗಿಕೊಂಡು ಮೇಲುಮೊಗನಾಗಿ ಅಶ್ವತ್ಥದ ಗೆಲ್ಲುಗಳನ್ನು ಎಣಿಕೆಹಾಕುತ್ತಿದ್ದೆ. ಅರೆನಿದ್ದೆಯಲ್ಲಿ ಅದರ ರೆಂಬೆಗಳ ಸಂಖ್ಯೆಯು ನನಗೆ ಒಂದಕ್ಕೆ ನೂರಾಗಿ ಕಾಣಿಸಿದವು. ಅದರ ಬೀಳಲುಗಳು ಒಂದಕ್ಕೆ ಸಾವಿರವಾಗಿದ್ದುವು. ಅದರ ಎಲೆಗಳು ದಿಗಂತವನ್ನೇ ಮುಟ್ಟಿಬಿಟ್ಟಿದ್ದುವು. ಒಮ್ಮೆ ನಾನು ಶೇಷಶಾಯಿಯಾಗಿರಲಾರೆನೇ? ಈ ಮರದ ಬೀಳಲುಗಳೂ ಎಲೆಗಳೂ ಸೇರಿ ಮಹಾಶೇಷವಾಗಿರಲಾರವೇ--ಎನಿಸಿತು. ಬಳಿಯಲ್ಲಿ ತಿರುಗಿ ನೋಡಿದೆ—ಸರಸ್ವತಿ ಸಾಕ್ಷಿಗಳಾದ ಎರಡು ಗ್ರಂಥಗಳು! ಛೀ—'ಈ ಸರಸ್ವತಿಯ ಬದಲು ಲಕ್ಷ್ಮಿ ಇರಬೇಕಿತ್ತು ಇಲ್ಲಿ'—ಎನಿಸಿತು ನನಗೆ. ಕಿಸೆಯಲ್ಲಿ ಬಿಡಿಗಾಸಿರಲಿಲ್ಲ. ಹೀಗಿದ್ದು, ಲಕ್ಷ್ಮಿಯ ಸಂಕೇತಕ್ಕೆ ಅಭಾವವಿರುವಲ್ಲಿ, ನಾನು ಲಕ್ಷ್ಮಿಯನ್ನು ಬಯಸಿದ ಮೂರ್ಖತನವನ್ನು ಕಂಡೋ ಏನೋ—ಯಾರೋ ಕಿಸಕ್ಕನೆ ನಕ್ಕಂತೆ ಕೇಳಿಸಿತು. ಆಗ ನನ್ನ ಎದೆಯಲ್ಲಿ, ಸ್ವತಃ 'ಟೆಂಪರರಿ' ನಾರಾಯಣನಾಗಿದ್ದ ನನ್ನ ವೃಕ್ಷಸ್ಥಳದಲ್ಲಿ, ಧಸಕ್ಕೆಂಬ ಸದ್ದು ಆಯಿತು. ಕತ್ತೆತ್ತಿ ಆಚೀಚೆ ತಿರುಗಿ ನೋಡಿದೆ. ಅದೇ ಪೂರ್ವೋಕ್ತ ಚಿತಿಯು, ಉತ್ತರೋಕ್ತ ಹೊಗೆಯೂ ಕಾಣಿಸಿಕೊಂಡವು. 'ನಕ್ಕದ್ದು ಯಾರಿರಬಹುದು? ಚಿತಿಯಿರಲಾರದು. ಚಿತಿಯಲ್ಲಿ ಈಗತಾನೆ ಜೀವವೆಸಗಿ ಹೋದ ಶವವಿರಲಾರದು. ಅನಿಲಾವಸ್ಥೆಗೆ ಸರಿದ ಆತ್ಮನಿರಲಾರದು'-ಎಂದು ತರ್ಕಸರಣಿ ತೊಡಗಿದೆ. ಆಗ ಯಾರೋ—'ಏನು ಲಕ್ಷ್ಮಿಯನ್ನು ಅರಸುತ್ತಿದ್ದೆಯಾ?' ಎಂದಂತಾಯಿತು.

"ಹೂಂ-" ಎಂದು ನನ್ನ ಊಹೆಯನ್ನು ನಾನೇ ಅನುಮಾನಿಸಿ ನುಡಿದೆ.

"ಶ್ಮಶಾನ ಲಕ್ಷ್ಮಿಯಿದ್ದಾಳಲ್ಲ" — ಎಂದಿತು ಆಕಾಶವಾಣಿ. ಈ ಪರಿಹಾಸ್ಯಕರ್ತರಾರೆಂದು ಎದ್ದು ಕುಳಿತು ನೋಡಿದೆ. ಕಣ್ಣು ಹಿಚುಕಿಕೊಂಡು ನೋಡಿದೆ. ಅಶ್ವತ್ಥ ವೃಕ್ಷದ ದಪ್ಪನಾದ ತಾಯಿದಿಂಡನ್ನು ನೋಡಿದೆ. ಮಾತನಾಡಿದ ವ್ಯಕ್ತಿಯು ಕಲ್ಲುರಾಶಿಯ ಮೇಲೆ ಕುಳಿತ, ಅಭ್ಯಂಜಿತನಾದ, ಸಿದ್ಧನೇ ಎಂಬ ಅನುಮಾನವಾಯಿತು.

'ನೀನು ನನ್ನನ್ನು ಉತ್ತರಿಸಿದವನೇ?" ಎಂದು ಆ ಶಿಲಾಧ್ಯಕ್ಷನನ್ನು ಕೇಳಿದೆ. "ಹೂಂ —" ಎಂದಿತು ಅದು.

"ಯಾಕೆ— ಪರಿಹಾಸ್ಯ ಮಾಡಿದೆ?"

"ನಿನಗೆ ಈ ಸ್ಥಳದಲ್ಲಿ ಲಕ್ಷ್ಮಿಯ ಯೋಚನೆಯಾಯಿತೇಕೆ?"

"ತಪ್ಪೇ?"

"ತಪ್ಪೆನ್ನಲಾರೆ— ಇಲ್ಲಿ ಬರುವವರೆಲ್ಲರೂ ಅದೇ ತೆರನಾಗಿಯೇ ಮಾಡುವವರು. 'ಹಣ'ವೆಂದು ಹೆಣವಾಗುವವರು."

"ನಾನು ಹಣಕ್ಕಾಗಿ ಲಕ್ಷ್ಮಿಯನ್ನು ಸ್ಮರಿಸಲಿಲ್ಲ.... ಸುಮ್ಮನೆ ಕಲ್ಪನೆಯ ನಾರಾಯಣ 'ಸಾನೆ'ಂದು ಊಹಿಸಿದೆ; ಲಕ್ಷ್ಮಿಯ ನೆನಪು ಆ ನಾರಾಯಣನಿಗಾಯಿತು. ಇರಲಿ — ನೀನಾರು?"

"ಸುಡುಗಾಡು ಸಿದ್ಧ."

"ನಾನು ಹಾಗೆಂದಾದರೂ ನಿನ್ನನ್ನು ಕರೆದೆನೇ?"

"ಈ ಊರವರು ನನ್ನನ್ನು ಹಾಗೇನೇ ಕರೆಯುತ್ತಾರೆ."

"ನಾನು ಇಲ್ಲಿಗೆ ಬಂದಾಗ ಅಂಥ ಹೆಸರೊಂದನ್ನು ನಿನಗಾಗಿ ಯೋಚಿಸಿದ್ದೆ."

ಇರಲಿ, ಇಲ್ಲಿ ನೀನಿದ್ದು ಮಾಡುವುದೇನು?"

"ಎಲ್ಲವನ್ನು ನೋಡುತ್ತಿರುವುದು."

"ಈ ಮಸಣವನ್ನೆ?"

"ಇಲ್ಲಿನ ಜೀವರುಗಳ ಆತುರವನ್ನು."

"ಏನು ಆತುರ?"

"ನೂರಾರು ಆತುರಗಳವು. ಒಂದೇ? ಎರಡೇ? ಅದರಲ್ಲಿ ಹಣದ ಆತುರ ಎಲ್ಲಕ್ಕೂ ಹೆಚ್ಚಿನದು."

"ನಿನ್ನ ಮಾತನ್ನು ಕೇಳುವ ಆತುರ ನನಗೀಗ ಆಗುತ್ತಿದೆ. ಅವು ಗಳ ವಿಚಾರ ಹೇಳುತ್ತೀಯಾ? ಓ ಅಲ್ಲಿ ಸಿಗರೇಟಿನ ಹೊಗೆಯಷ್ಟು ಮೃದುವಾಗಿ ಉರಿಯುವ ಚಿತಿ ಯಾರದ್ದು?"

"ಅಲ್ಲಿಯ ತನಕ ಹೋಗಿ ನೋಡಿ ಬಾ — ಹೇಳುತ್ತೇನೆ."

ನಾನೇ? ಕುತೂಹಲಭರಿತನಾಗಿ ಅಲ್ಲಿಯತನಕವೂ ಹೋಗಿ ನೋಡಿದೆ — ಅರೆಕರಟಿದ ಶರೀರವೊಂದು ಅಲ್ಲಿ ಬಿದ್ದಿತ್ತು. ಅದರ ಜತೆಯಲ್ಲಿ ನಾಲ್ಕಾರು ಕಿರಿಯ ಕಟ್ಟಿಗೆಗಳು ಸಾಯುವುದರಲ್ಲಿದ್ದುವು. ಆಶ್ಚರ್ಯ ಭರಿತನಾಗಿ ಮರಳಿ ಬಂದೆ.

"ಸಿದ್ಧಪ್ಪಾ, ಈ ಊರವರು ಹೆಣವನ್ನು ಪೂರ್ಣವಾಗಿ ಸುಡು ವುದೂ ಇಲ್ಲವೇ?" ಎಂದೆ.

"ನೋಡಪ್ಪ-ಊರಲ್ಲಿ ಕಟ್ಟಿಗೆಗೆ ತುಂಬ ಬೆಲೆ ಹೇಳುತ್ತಿದ್ದಾರೆ."

"ಸತ್ತವನು ಬಡವನೇ?"

"ಈ ಊರಿನ ಧನಿಕರಲ್ಲಿ ಧನಿಕ.".

"ಹಾಗಿದ್ದರೆ?"

"ಜಿಪುಣರಲ್ಲಿ ಜಿಪುಣ. ಊರಲ್ಲಿ ಶವಸಂಸ್ಕಾರಕ್ಕೆ ಇಂತಿಷ್ಟೆ ದರ-ವೆಂದು ವಾಡಿಕೆಯಿದೆ. ಕಟ್ಟಿಗೆಯು ಅಗ್ಗವಾಗಿ ಮಾರುವಾಗಲೇ ಅವನ್ನು ನೊಂದಿಸಿ ಆಚೆಗೆ ಎಳೆಯುವ ಜನರಿದ್ದಾರೆ; ಈಗ ಅದಕ್ಕೆ ಬೆಲೆ ಏರಿರಲು ಮಾಮೂಲಿನ ದರಕ್ಕೆ ಶವಸಂಸ್ಕಾರ ಪೂರ್ತಿಯಾದೀತೇ?"

"ಹಾಗೂ ಇದೆಯೇ? ಹಾಗಿರಲು ಉಳಿದ ಜನರ ಶವಸಂಸ್ಕಾರ

ವಾದರೂ ಸಮನಾಗಿ ನಡೆದೀತೆ?"

ಉಳಿದವರ ವಿಷಯವೇ! ಬಂಧುಗಳಾದವರಿಗೆ, ಅವರಲ್ಲೂ ಎಷ್ಟೋ ಮಂದಿಗೆ, ಶವ ಸುಡುವ ತನಕ ಕಾಯುವ ತಾಳ್ಮೆಯಿದೆಯೇ? ಅದರಿಂದ ಅವರು ಬೇಗನೇ ಹೊರಟುಹೋಗುತ್ತಾರೆ. ಮುಂದೆ ಉಳಿಯುವ ಕಟ್ಟಿಗೆಯನ್ನಾದರೂ ಉಳಿಸಿಕೊಳ್ಳುವುದು ಇಲ್ಲಿನವರ ಕಸಬು."

"ಅನುಭವಶಾಲಿ ಸಿದ್ಧಪ್ಪ, ನೀನಿಲ್ಲಿ ಬಂದ ಬಳಿಕ-ಎಷ್ಟೆಷ್ಟು ಶವ ಸಂಸ್ಕಾರಗಳನ್ನು ಕಂಡಿದ್ದೀಯಾ!"

"ಎಷ್ಟೇ? ಅದಕ್ಕೊಂದು ಮಿತಿಯುಂಟೇ? ಯಾರೋ ದನಕಾಯುವ ಮಕ್ಕಳು ನನ್ನನ್ನು ಇಲ್ಲಿ ಆಟಕ್ಕಾಗಿ ಒಂದು ದಿನ ಕೂರಿಸಿ ಹೋದರು ನಿಜ. ಆದರೆ ಊರವರು ಅಂದಿನಿಂದ ನನ್ನನ್ನು ಮಸಣದ ಕಾವಲಿಗನನ್ನಾಗಿ ಮಾಡಿದ್ದಾರೆ. ಬರಿಯ ಶವಸಂಸ್ಕಾರವೇನು! ಅನಂತರದ ಅನೇಕ ವಿಧಿಗಳಿಗೂ ನಾನು ಸಾಕ್ಷಿಯಾಗಿದ್ದೇನೆ. ಅಷ್ಟೇ ಅಲ್ಲ—ಸತ್ತವರ ಮೈಮೇಲೆ ಉಳಿದಿರಬಹುದಾದ ಚಿನ್ನ ಬೆಳ್ಳಿಗಳು ಕರಗಿ ಬಿದ್ದುದನ್ನು ಆರಿಸುವುದನ್ನೂ ನೋಡಿದ್ದೇನೆ."

"ಸತ್ತವರ ಶವದಿಂದಲೂ ಸುಲಿಗೆ ಮಾಡುತ್ತಾರೆಯೇ?"

"ಅದರಲ್ಲೇನು ಆಶ್ಚರ್ಯ! ಬದುಕಿದವರನ್ನು ಸುಲಿದು ಶವವಾಗಿ ಮಾಡುವುದಿಲ್ಲವೇ? ಹಿಂದೊಮ್ಮೆ ಹೀಗಾಯಿತು—ಒಂದು ಶವವನ್ನು ರಾತ್ರಿ ಇಲ್ಲಿ ಅವಸರ ಅವಸರವಾಗಿ ಸಾಗಿಸಿತಂದರು. ಅವಸರ ಅವಸರವಾಗಿ ಇರಿಸಿ ಸುಟ್ಟರು. ಆದರೆ ಅದು ಸುಟ್ಟು ಬೂದಿಯಾಗುವವರೆಗೂ ಕಾದು ಇದ್ದು ಹೋದರು."

"ಅದು ಅಷ್ಟೇನು ಆಶ್ಚರ್ಯದ ಸಂಗತಿಯೇ?"

"ಅದರ ಆಶ್ಚರ್ಯವಿಷ್ಟೆ—ಆಗ ಇಲ್ಲಿ ಸಂಚರಿಸುತ್ತಿದ್ದ ಶವದ ಪ್ರೇತಾತ್ಮವು ಆ ರಾತ್ರಿಯೆಲ್ಲಾ ಇಲ್ಲಿ ರೋದಿಸುತಿತ್ತು. ಬಹಳ ದಿನಗಳ

ತನಕವೂ ಅದು ರೋದಿಸುತ್ತಿತ್ತು. 'ತನ್ನವರೇ ನನ್ನನ್ನು ಕೊಂದು, ಕಾಯಿಲೆಯೆಂದು ಊರಿಗೆ ಸಾರಿ, ಅವಸರವಾಗಿ ಇಲ್ಲಿಗೆ ತಂದು ಸುಟ್ಟು ಹೋದರು' ಎಂದು ಅಳುತ್ತಿತ್ತು!"

"ಅಂಥ ಬಂಧುಗಳುಂಟೇ?"

"ಬಂಧುಗಳಿಗೆ ಈ ಸಾವು ತುಂಬ ಲಾಭ ತರುವಂಥದಿತ್ತು. ಅವನೊಬ್ಬ ಮುದುಕ. ಸಾಯುವತನಕವೂ ತನ್ನ ಬಂಧುಗಳಿಗಾಗಲಿ ಮಕ್ಕಳಿಗಾಗಲಿ ಬಿಡಿಗಾಸನ್ನು ತೆತ್ತಿರಲಿಲ್ಲ. ಸಾಲದುದಕ್ಕೆ ತನ್ನ ಆಸ್ತಿಪಾಸ್ತಿಗಳನ್ನು ಬಂಧುಗಳ ಮೇಲಿನ ಹಗೆಯಿಂದ, ಯಾರಾರಿಗೆ ದಾನ ಮಾಡುತ್ತೇನೆಂದು ಗದರಿಸುತ್ತಿದ್ದನಂತೆ. ಅದಕ್ಕಾಗಿ ಅವನವರೇ ಅವನಿಗೆ 'ಕಂಪಲ್ಸರಿ' ಮರಣಶಾಸನ ವಿಧಿಸಿದರು. ಅವನು ಹೇಗೂ ಮುಪ್ಪಿನವ; ಥಟ್ಟನೆ ಅವನ ಎದೆಗುಂಡಿಗೆ ಬಡಿತ ನಿಂತಿತೆಂದು ಸಾರಿ, ಸಾವಿನ ಸುದ್ದಿ ಊರಿಗೆ ಹರಡುವ ಮೊದಲೇ ಶವವನ್ನು ಇಲ್ಲಿ ತಂದು ಸುಟ್ಟರು!"

"ಬೇರೇನು ವಿಚಿತ್ರಗಳನ್ನು ಕಂಡಿದ್ದೀಯೆ?"

"ಅಷ್ಟೇ ವಿಚಿತ್ರವಾದ ಸಹಗಮನವೊಂದನ್ನು ಕಂಡಿದ್ದೇನಪ್ಪ. ಅದೂ ಹಳೆಯ ನೆನಹು. ಈ ಊರಾಕೆಯೊಬ್ಬಳು, ಬಲು ಹೆಸರಾದವಳು . . . ."

"ಹೆಸರಾದವಳೆಂದರೆ?"

"ಒಣಪು ಬಿನ್ನಾಣಗಳಿಗೆ ಹೆಸರಾದವಳು. ಅವಳು ವಿವಾಹಿತಳಾಗಿದ್ದರೂ ಹೆಸರಾದ ಜಾತಿ. ಆದರೆ ಅಂದಿನ ಊರಿನ ಧರ್ಮವೇ ಸಹಗಮನ ಧರ್ಮ. ಮಡದಿಯರು ಗಂಡಂದಿರನ್ನು ಸ್ಮಶಾನದಲ್ಲಿ ಬೆರೆಯುವ ದಿನಗಳವು. ಇವಳ ಬಂಧುಗಳು ಅವಳ ಗಂಡನು ಮೃತಿಗೊಂಡ ದಿನ ಅವಳನ್ನು ಸಹಗಮನಕ್ಕಾಗಿ ಸಿಂಗರಿಸಿದರು. ಅವಳು ರೋದಿಸತೊಡಗಿದಳು. ಅವಳನ್ನು ಹಿಡಿದು ಬಲವಂತದಿಂದ ಇಲ್ಲಿಗೆ ತಂದರು. 'ನೀನು

ಸಾಧ್ವಿ, ಚಿತಿಯನ್ನೇರಿದರೆ ಸ್ವರ್ಗ ಸೇರುವೆ' ಎಂದರು."

"ಅವಳು ಚಿತಿಯನ್ನೇರಿದಳೇ?"

"ಅವಳಿಗೆ ಬಾಳುವ ಆಸೆ ಬಹಳವಾಗಿತ್ತು. ಇನ್ನು ಹಲವು ಗಂಡಂದಿರು ಉಳಿದಿರುವರೆಂಬ ಧೈರ್ಯವಿತ್ತು. ಆದರೇನು? ಬಂಧುಗಳಿಗೆ ಅವಳ ಪಾತಿವ್ರತ್ಯವನ್ನಾದರೂ ಕಾಯುವ ಬಯಕೆ ತುಂಬ. ಆಕೆಯು ಕೊನೆಗೆ ಈ ಕೆಲಸಕ್ಕೆ ಸಮ್ಮತಿಯಿತ್ತಳು. ಬಂಧುಗಳು ಅವಳ ಕೈಯಲ್ಲಿ ದೊಂದಿಯನ್ನಿರಿಸಿದರು. ಈಕೆಯು ಅದನ್ನಪ್ಪಿ ಹಿಡಿದು ಚಿತಿಗೆ ಸುತ್ತುವರಿದು ಬಂದಳು. ಅಲ್ಲಿಂದಲೇ ದೊಂದಿ ಎಸೆದು ಓಟ ಓಡಿ ಕಣ್ಮರೆಯಾದಳು. ಅವಳ ಪತಿಯ ಶವವು ಅನಾಥವಾಗಿ, ಸಹಧರ್ಮಿಣಿಯಿಲ್ಲದೆ ಆ ರಾತ್ರಿಯೆಲ್ಲವೂ ಮರುದಿನವೆಲ್ಲವೂ ಅಲ್ಲೇ ಕಾದು ನಿಂತಿತು. ಕೊನೆಗೆ ಬಂಧುಗಳ ಧರ್ಮಬುದ್ಧಿಯಿಂದಾಗಿ ಅವಳ ಶೋಧನೆಯು ನಡೆದು, ಅವಳಿಗೆ ಬಲವಂತದ ಸಹಗಮನ ಪ್ರಾಪ್ತವಾಯಿತು. ಆ ರಾತ್ರಿ ಈ ಮಸಣದ ಆವರಣವೆಲ್ಲ ಆಕೆಯ ಪ್ರೇತದ ಕಿರುಚಾಟದಿಂದ ತುಂಬಿ ಹೋಗಿತ್ತು. ಎಲ್ಲೆಲ್ಲಿಯೂ ಅವಳ ಗಂಡನ ಪ್ರೇತಾತ್ಮವು ರೋದಿಸುತ್ತಿತ್ತು. 'ಬದುಕಿದ್ದಾಗ ಅವಳಿಂದ ಪಾರಾಗಲಿಲ್ಲವೆಂದು ಸತ್ತೆ. ಸತ್ತು ಸುಖಪಡೆದೇನೆಂದರೆ, ನನ್ನ ನೆರಳನ್ನು ಅನುಸರಿಸಲು ಅವಳ ಪ್ರೇತವನ್ನು ನನ್ನ ಬಳಿಗೂ ಅಟ್ಟಿದಿರಾ?' ಎಂದು ಬಂಧುಗಳನ್ನು ಶಪಿಸುತ್ತ ಅದು ಕೂಗುತ್ತಿತ್ತು."

"ತೀರ ಮರುಕದ ಕತೆಯಿದು!"

"ಯಾರಿಗಾಗಿ ಮರುಕ?"

"ಆಕೆಯನ್ನು ಕೊಂದವರ ಅಜ್ಞಾನಕ್ಕಾಗಿ."

"ಮಡಿದ ಪತಿಗಾಗಿ ನಿನ್ನ ಸಹಾನುಭೂತಿಯಿಲ್ಲವೇ?"

"ಏತಕ್ಕೆ — ಅವನ ಪಾಡಿಗೆ ಅವನು ಸತ್ತಿಲ್ಲವೇ?"

"ಅವನ ಮಡದಿಯು ಅವನ ಬೆನ್ನನ್ನು ಬಿಡದೆ ಸ್ವರ್ಗದಲ್ಲೂ ಕಾಡುವಳೆಂಬ ಯೋಚನೆ ನಿನಗೆ ಬರಬಾರದೇ?"

"ಅಂಥ ಸ್ಥಿತಿಯುಂಟೇ? ಸತ್ತವರು ಉಳಿಯುವರೇ? ಉಳಿಯುವುದು ಬೂದಿ ಮಾತ್ರ ಅಲ್ಲವೇ?" ಎಂದೆ ನಾನು.

"ನಿನಗೆ ಪ್ರೇತಗಳಲ್ಲೂ, ಕೊಲೆಗಳಲ್ಲೂ ವಿಶ್ವಾಸವೇ!"

"ನಾನಾವ ಪ್ರೇತವನ್ನೂ ಕಂಡಿಲ್ಲ. ನೀನು ತೋರಿಸಬಲ್ಲೆಯಾದರೆ ನೋಡಲು ಸಿದ್ಧನಿದ್ದೇನೆ."

"ನಿನಗೆ ನಂಬಿಕೆ ಇದ್ದರೆ ಮಾತ್ರ ಅವುಗಳು ಕಾಣಿಸುವುವು. ನಿನಗೆ ನಂಬುಗೆ ಇಲ್ಲದಿರಲು, ಅವನ್ನು ನಿನಗೆ ಹೇಗೆ ತೋರಿಸಲು ಬಂದೀತು? ನೀನು ನಂಬುವೆಯಾದರೆ ನಿನಗೆ ಬ್ರಾಹ್ಮಣರ ಪ್ರೇತಗಳನ್ನೋ, ಸ್ತ್ರೀ ಪ್ರೇತಗಳನ್ನೋ, ಶೂದ್ರಪ್ರೇತಗಳನ್ನೋ-ಬೇಕಾದುವನ್ನು ತೋರಿಸಬಹುದು."

"ಪ್ರೇತಗಳಲ್ಲಿ ಜಾತಿ, ಲಿಂಗಭೇದಗಳಿವೆಯೋ?"

"ಆ ಜೀವರುಗಳು ಈ ನಗರದಲ್ಲಿರುವಷ್ಟು ಕಾಲ ಅವು ಇದ್ದುವು. ನೋಡು ಆ ತೆಂಕಣದ ಭಾಗವನ್ನು — ಅಲ್ಲಿ ಶೂದ್ರಾದಿಗಳನ್ನು ಸುಡುವರು. ಬ್ರಾಹ್ಮಣರ ಶವಗಳನ್ನು ಈ ಕಡೆಯಲ್ಲಿ ಸುಡಬೇಕು. ಎಲ್ಲಾದರೂ ಅಲ್ಲಿನ ಹೆಣ ಇಲ್ಲಿಗೆ ಬಂದರೆ ಕೋಲಾಹಲವಾದೀತು."

"ಸ್ಮಶಾನದಲ್ಲಿ ಪಾಳುಗಾರಿಕೆಯೋ?"

"ನೀನೇನು ಬಲ್ಲೆ? ಒಮ್ಮೆ ಒಬ್ಬ ಶ್ರೀಮಂತ ಸೆಟ್ಟಿಯನ್ನು ಇಲ್ಲಿಗೆ ಸುಡಲು ತಂದರು. ಇಲ್ಲಿಗೆ ಎಂದರೆ ಈ ಕಡೆಗೆ. ಇಲ್ಲಿ ಯಾವಾಗಲೂ ಬ್ರಾಹ್ಮಣರನ್ನು ಸುಡುವ ರೂಢಿಯಿತ್ತು. ಆ ಸೆಟ್ಟಿಯ ಸಲುವಾಗಿ ಚಿತಿಯನ್ನು ಸಿದ್ಧ ಮಾಡಿದಾಗಲೇ ಇಲ್ಲಿಗೆ ಒಂದು ಬ್ರಾಹ್ಮಣಶವವು ಬಂದಿತು. ಆಗಲೇ ಶವವಾಹಕರೊಳಗೆ ವಾದವೆದ್ದಿತು. 'ಈ ಚಿತಿಯು ಇಲ್ಲಿರತಕ್ಕ

ದಲ್ಲ—ತೆಂಕಣ ಭಾಗದಲ್ಲಿ ಇರಬೇಕೆ'ಂದು ವಾದವಾಯಿತು. ಆದರೆ ಶ್ರೀಮಂತ ಸೆಟ್ಟಿಯ ಹೆಣವು ಬಡ ಬ್ರಾಹ್ಮಣನ ಶವಕ್ಕೆ ಎಡೆಮಾಡಿಕೊಟ್ಟೀತೇ? ಅಂತೆಯೇ ಬಂದವರು ಎರಡೂ ಶವಗಳನ್ನು ಅಲ್ಲೇ ಇರಿಸಿಹೊಡೆದಾಡಿ ಇನ್ನೆರಡು ಶವಗಳನ್ನು ಹೆಚ್ಚಿಸಿದರು. ಅನಂತರ ನ್ಯಾಯಸ್ಥಾನದ ತನಕ ದೂರು ಹೋಗಿ, ಈ ಮುಸಣವು ಒಂದಲ್ಲವೆಂದೂ ಎರಡೆಂದೂ, ಅನಾದಿಯಿಂದಲೂ ಇಲ್ಲಿ ಬ್ರಾಹ್ಮಣರು ಬೂದಿಯಾಗತಕ್ಕುದೆಂದೂ, ತೆಂಕಣ ಭಾಗದಲ್ಲಿರುವ ಎಡನೆ ಮುಸಣವು ಶೂದ್ರಾದಿಗಳದ್ದೆಂದೂ ಸ್ಥಾಪನೆಯಾಯಿತು. ಅಂದು ಊರವರ ಅಭಿಮಾನದಿಂದ ಎರಡು ಭಾಗಗಳಿಗೂ ಬೇರೆ ಬೇಲಿಗಳು ಬಂದುವು. ಎರಡಕ್ಕೂ ಎರಡು ಮಹದ್ವಾರಗಳಾದುವು. ಪರಸ್ಪರ ವೈಷಮ್ಯವು ಎರಡು ಚಾವಡಿಗಳ ನಿರ್ಮಾಣಕ್ಕೆ ಕಾರಣವಾಯಿತು; ಇಲ್ಲಿಗೆ ಬರುವ ಹೆಣಗಳ ಬಂಧುಗಳು ಬಿಸಿಲಲ್ಲಿ ನಿಂತಿರಬಾರದೆಂದು."

"ಈಗ ಅವೊಂದೂ ಕಾಣಿಸವಲ್ಲ!"

"ನೂರು ವರ್ಷಗಳ ತನಕ ಯಾವ ಬೇಲಿ ನಿಂತೀತು? ಯಾವ ಬಂಗಲೆ ಉಳಿದೀತು? ಯಾವ ಹಟ ತಾಳೀತು? ಮುಸಣದಲ್ಲಿ ಕಟ್ಟಿಸಿದ ಅಂದಿನ ಚಾವಡಿಗಳು ಆರೈಕೆಯಿಲ್ಲದೆ ಮಳೆಗಾಳಿಗೀಡಾಗಿ ಮುರಿದುಬಿದ್ದುವು. ಕೊನೆಗೆ ಬ್ರಾಹ್ಮಣರ ಚಾವಡಿಯ ಮರ, ಜಂತಿಗಳನ್ನು ಅಬ್ರಾಹ್ಮಣನಾವನೋ ಸಾಗಿಸಿದನು. ಅಬ್ರಾಹ್ಮಣರ ಚಾವಡಿಯ ಮಾಡು ಮರಮುಟ್ಟುಗಳು ಇನ್ನೊಬ್ಬ ಬ್ರಾಹ್ಮಣನ ಹಿತ್ತಿಲನ್ನು ಬೆಳಗಿದುವು."

"ಸುಡುಗಾಡಿನಲ್ಲೂ ಸ್ವಾರಸ್ಯವಿದೆ."

"ಅಂತೆಯೇ ನಾನಿಲ್ಲಿ ಅಂದಿನಿಂದ ಇಂದಿಗೂ ಕದಲದೆ ನಿಂತಿದ್ದೇನೆ. ಜನಗಳ ಕೊಳೆ, ಕಲಹಗಳಾವುವೂ—ಇಲ್ಲಿಯೂ ಸುಟ್ಟು ಶುಚಿಯಾಗುವುದಿಲ್ಲ ಎಂಬುದನ್ನು ನೋಡಿ ನಗುತ್ತಿದ್ದೇನೆ."

"ಆದರೆ ಸಾವು ಧನಿಕ, ಬಡವನೆಂಬ ಭೇದವನ್ನಾದರೂ ಅಳಿಸುತ್ತದೆ ಎಂಬುದನ್ನು ನೋಡುತ್ತಿದ್ದಿಯಲ್ಲ. ಅದೊಂದೇ ತತ್ವ ಸಾಕು 'ಸೋಶಲಿಸಮ್' ಸಾಧಿಸಲು."

"ಅದೇನು – 'ಇಸುಮೋ' ನನಗೆ ತಿಳಿಯದು. ಇಲ್ಲಿ ಆ ಇಸುಮೂ ಇಲ್ಲ. ಹಿಂದೊಮ್ಮೆ ಆ ಊರಿನ ಪಾಳೆಯಗಾರನ ಶವವೊಂದು ಇಲ್ಲಿಗೆ ಬಂದಿತು. ಅವನನ್ನು ಬರಿಯ ಗಂಧದ ಚಕ್ಕೆಗಳಿಂದಲೇ ಸುಡಿಸಿದರು. ಆದರೆ ಎಷ್ಟೋ ಬಡಬಗ್ಗರ ಹೆಣಗಳು ಅರ್ಧಮರ್ಧ ಕಟ್ಟಿಗೆಗೂ ಗತಿಯಿಲ್ಲದೆ ದಹನವಾಗುತ್ತಿವೆ."

ಆ ದಿನ, ಸಿದ್ಧನೊಂದಿಗೆ ನನ್ನ ಸಂಭಾಷಣೆಯು ಇನ್ನೂ ಹೆಚ್ಚಾಗಿ ಮುಂದುವರಿಯಲಿಲ್ಲ. ನಾನು ಸಂಜೆಮಾಡಿಕೊಂಡು ಮನೆಗೆ ಬಂದೆ. ಮುಂದೆ ಎಷ್ಟೋ ಬಾರಿ ಅಲ್ಲಿಗೆ ಹೋದರೂ ನನಗೆ ಅಲ್ಲಿದ್ದಾಗ ಓದುವ ಇಲ್ಲವೆ ಬರೆಯುವ ಮನವಾಗಲಿಲ್ಲ. ಆ ವೃಕ್ಷಗಳ ನೆರಳಿನಲ್ಲಿ ಕುಳಿತೆ. ಸಿದ್ಧನಮುಖ ನೋಡಿದೊಡನೆಯೇ "ಸತ್ತವರು ಪ್ರೇತವಾಗುತ್ತಾರೆಯೇ? ಈ ಸಿದ್ಧನ ಮಾತನ್ನು ನಾನು ನಂಬಬೇಕೆ,ಬೇಡವೇ? ನಂಬುವುದಾದರೆ ಸತ್ತು ಪ್ರೇತವಾದವರಲ್ಲೂ ಶ್ರೀಮಂತ ಬಡವ-ಕೆಪಿಟಲಿಸ್ಟು, ಕೂಲಿಗಳೆಂಬ ಭೇದವಿದ್ದೀತೇ, ಇರಲಾರದೇ" ಎಂಬ ಅನೇಕ ಸಮಸ್ಯೆಗಳು ಕಣ್ಮುಂದೆ ಬರುತ್ತಿದ್ದುವು. ಆದರೆ ನಾನು ಪ್ರೇತಗಳನ್ನು ನಂಬದೆ ಹೋದುದರಿಂದ ಸಮಾಜವಾದದ ಇನ್ನೂ ಹೆಚ್ಚಿನ ಸಮಸ್ಯೆಗಳನ್ನು ಬಗೆಹರಿಸದೆ ಸುಮ್ಮನೆ ಕುಳಿತಿರಬೇಕಾಯಿತು.

ಹತ್ತುವರ್ಷಗಳ ಬಳಿಕ ನಾನು ಆ ಊರಿಗೆ ಇನ್ನೊಮ್ಮೆ ಹೋಗಿದ್ದೆ ಆಗ ನನಗೆ ತಿರುಗಿ ಸಿದ್ಧೇಶ್ವರನ ದರ್ಶನ ಪಡೆಯುವ ಮನವಾಗಿ ತಿರುಗಿ ಮಸಣಾಭಿಮುಖವಾಗಿ ಹೊರಟೆ. ಶ್ಮಶಾನ ಬಂದಿತು. ಎರಡು ಮರಗಳೂ ಅಲ್ಲಿದ್ದುವು. ಸಿದ್ಧಪ್ಪನಂತೂ ಅಲ್ಲಿ ನಗುತ್ತ ಕುಳಿತಿದ್ದ. "ಅಪ್ಪಾ

ಹಳೆಯ ಗೆಳೆಯನ ಗುರುತೇ" ಎಂದು ಕೇಳಿದೆ. ಆತ ನಕ್ಕನು. "ಹೇಗಿದ್ದೀಯಾ, ಹೆಚ್ಚಿನದೇನು ವಿಶೇಷ!" ಎಂದು ಕೇಳಿದೆ. ಆತನು ನಗುತ್ತ — ನೇರಾಗಿ ಎದುರಿಗೆ ಕೈಮಾಡಿ "ಅಲ್ಲಿ ನೋಡು" ಎಂದ.

"ಅವನು ತೋರಿಸಿದ್ದು ಆ ಮಸಣದಾಚೆಗೆ, ರಸ್ತೆಯಾಚೆಗೆ. ತುಂಬ ಸುಣ್ಣ ಬಳಿದ ಗೋರಿಯೊಂದು ಅಲ್ಲಿ ವಿರಾಜಿಸಿತ್ತು. "ಹೊಸ ಸುಧಾರಣೆ" — ಎಂದು ಉದ್ಗರಿಸಿದೆ.

"ಅದೇನು ಊಹಿಸುವೆಯಾ" ಎಂದು ಕೇಳಿದ.

ತಕ್ಷಣ — "ಪಾಕಿಸ್ತಾನ್" ಎಂದು ಉತ್ತರವಿತ್ತೆ!

ನಾನೇನೋ ಚೇಷ್ಟೆಗೆ ಉತ್ತರವಿತ್ತದ್ದು ನಿಜ. ಆದರೆ ನನಗೇನೆ ಈ ಮೂರನೆಯ ಮಸಣ ಅಲ್ಲೇಕೆ ಕಲ್ಪಿತವಾಯಿತು ಎಂದು ಹೊಳೆಯದೆ "ಏನದು?" ಎಂದು ಕೇಳಿದೆ.

ಸಿದ್ದಪ್ಪ ತಿರುಗಿ ಬೆರಳು ಮಾಡಿದ. ಆ ಕಡೆ ನಾನು ಬರುವ ಹಾದಿಯಲ್ಲೇ ಹೊಸದಾಗಿ ಒಂದು ಮಸೀದಿ ಹುಟ್ಟಿದ್ದು ಕಾಣಿಸಿತು.

"ಅದೇನು, ಇದೇನು" ಎಂದೆ.

ಅದೇ — ತಿಳಿಯದೇ? ಒಂದು ದಿನ ನಮ್ಮ ನಾಗರಿಕರು ಭಜನೆ ಮಾಡುತ್ತ ಒಬ್ಬ ಸಾಧುವಿನ ಶವವನ್ನು ಹೊತ್ತು ತಂದರು. ಭಜನೆಯು ಮಸೀದಿ ಮುಂದೆಯೇ ನಡೆಯಿತು. ಗೊಂದಲವೆದ್ದಿತು. 'ಭಜನೆ ನಿಲ್ಲಿಸೆ'ಂದು ಒಂದು ಕಡೆಯಿಂದ ಆಜ್ಞೆ ಬಂದಿತು. ಇನ್ನೊಂದು ಕಡೆಯವರು ಅಯೋಧ್ಯೆಗೆ ಕೇಳಿಸುವಷ್ಟು ಗಟ್ಟಿಯಾಗಿ ಅಯೋಧ್ಯಾರಾಮನನ್ನು ಕೂಗಿದರು-ಸೀತೆಯನ್ನು ಭೂಮಿಯಿಂದೆಬ್ಬಿಸುವಷ್ಟು ಬಲವಾಗಿ ಸೀತಾರಾಮನನ್ನು ಒದರಿದರು. ಅದರ ಪ್ರತಿಫಲವಾಗಿ ಆ ದಿನ ಆರು ಹೆಣಗಳು ಸಾಧುವಿನ ಬೆಂಗಾವಲಿಗೆ ಬಂದುವು. ಅವು ಹಿಂದೂ ಹೆಣಗಳು. ಅವು ಈ ಕಡೆಗೆ ಬಂದು ಮಾಯವಾದುವು. ಇದಿರಾಳಿಗಳಲ್ಲಿ ಒಬ್ಬನು

ಮೃತಿಯಾಗಿ ಅವನು ಧರ್ಮರಕ್ಷಕನಾದನು. ಆ ಎದುರಿಗಿರುವುದು ಅವನ ಸ್ಮಾರಕ."

ಸರಿ, ನಾನು ಅಲ್ಲಿಗೆ ಹೋದೆ. ಧರ್ಮಕ್ಕಾಗಿ ಕಾದಾಡಿದ ವೀರನ ಸಲುವಾಗಿ ಮರುಗಿದೆ. "ಅಯ್ಯೋ ದೇವರೇ, ಸ್ವರ್ಗದಲ್ಲೂ ಈ ಪಾಕಿಸ್ತಾನದ ಕೂಗು ತಲೆದೋರಿದರೆ ಏನು ಮಾಡುತ್ತೀಯಾ?" ಎಂದುಕೊಂಡೆ.

ಆದರೆ ನನ್ನೆದುರಿಗೇನೆ ನನ್ನ ಅನುಮಾನವನ್ನು ಪರಿಹರಿಸುವಂತೆ ನಾಲ್ಕಾರು ಹಿಂದೂ ಸ್ತ್ರೀಯರು ಅಲ್ಲಿಗೆ ಬಂದು ಸುತ್ತುವರಿದರು. ಒಂದೊಂದು ಕಾಸನ್ನಿರಿಸಿ, ಅಲ್ಲಿದ್ದ ಬೂದಿಯುನ್ನು ಎತ್ತಿ ಹಣೆಗೆ ಹಚ್ಚಿ ಹೊರಟುಹೋದರು.

"ಸಿದ್ಧಪ್ಪಾ ಅದೇನು—"ಎಂದು ಬೆಪ್ಪಾಗಿ ಅವನಲ್ಲಿಗೆ ಬಂದು ತಿರುಗಿ ದೂರನ್ನಿಟ್ಟೆ. ಈಗ ಬಂದಿರುವ ಸ್ತ್ರೀಯರ ನಂಬುಗೆಯಲ್ಲಿ ಅವನೊಬ್ಬ ಸಾಧುವಂತೆ. ಅವನಿಗೆ ಹರಕೆ ಹೊತ್ತರೆ ರೋಗ ನಿವಾರಣೆಯಾಗುವುದಂತೆ, ಸಂತಾನವಾಗುವುದಂತೆ,ಪತಿಲಭ್ಯವಾಗುವುದಂತೆ!ಎಂದು ತಿಳಿದಿದ್ದಾರೆ" ಎಂದನು ಆತ.

"ಸಿದ್ಧಪ್ಪಾ, ಹಾಗಾದರೆ ನಿನ್ನನ್ನೂ ಆ ತೆರನಾಗಿ ನಂಬಿ ಪೂಜಿಸರೇ" ಎಂದೆ.

"ಆತನ ಗೋರಿ, ಅಲ್ಲಿ ಬಂದು ನಿಂತಾಗಿನಿಂದ ನನಗೆ ಆಗುತ್ತಿದ್ದ ಎಣ್ಣೆ ಸ್ನಾನವೂ ವಜಾ ಆಗಿದೆ"—ಎಂದು ಉತ್ತರ ಬಂದಿತು.

ಆ ಮಾತನ್ನಾಡುವಾಗ ಆತನಿಗೂ ಸ್ಮಶಾನ ವೈರಾಗ್ಯ ಬಡಿದಂತೆ ಕಾಣಿಸುತ್ತಿತ್ತು.



# ಅಶ್ವತ್ಥ ಪ್ರಲಾಪ.

'ಅಶ್ವತ್ಥ' ಎಂದು ಕೇಳಿದೊಡನೆಯೇ, ನಿಮ್ಮ ಮನಸ್ಸನ್ನು 'ಹಾ ಪ್ರಿಯಾ ಪ್ರಶಾಂತ ಹೃದಯಾ'ವನ್ನು ಹಡೆದ ಹಾಡುಗಾರ್ತಿಯ ಕಡೆಗಾಗಲಿ, ರಾಜಕೀಯ ಉದ್ವೇಗಭರಿತರಾಗಿ 'ವಿದುರಾಶ್ವತ್ಥ'ಕ್ಕಾಗಲಿ ಒಯ್ಯಬೇಡಿ. ನಾನೆನ್ನುತ್ತಿರುವ ಅಶ್ವತ್ಥವು 'ಊರ್ಧ್ವಮೂಲ ಅಧಃ ಶಾಖಂ' ಬಾಬತ್ತಿನದು; ವೃಕ್ಷಕೂಟಕ್ಕೆ ಸೇರಿದುದಾದರೂ ದೈವತ್ವವನ್ನು ಗಳಿಸಿಕೊಂಡ ಮರವು. ಇಂದಿಗೂ ಅಶ್ವತ್ಥವು ಅಶ್ವತ್ಥನಾರಾಯಣರಾಯನಾಗಿ ದೈವತ್ವದ ಮನ್ನಣೆಯನ್ನು ನಾಡಿನಲ್ಲೆಲ್ಲ ಗಳಿಸುತ್ತಿರುವುದಾದರೂ, ಪ್ರಕೃತ ನನ್ನ ಲೇಖನಿಗೆ ಆಹುತಿಯಾಗಿರುವ ಮರವು ಹಿಂದೇನೋ ಹಾಗಿದ್ದರೂ, ಈಗ ಹಾಗಿಲ್ಲ. ಅಮರತ್ವದಿಂದ ಅದು ಬರಿಯ 'ಮರ'ತ್ವಕ್ಕೆ ಅವತರಿಸಿ ವ್ಯಥೆಗೀಡಾಗಿದೆ. ಕನ್ನಡ ಜನದ ಮಹಾವೈಭವದಂತೆ ಅದರದ್ದೂ ಗತ—ವೈಭವವಾಗಿದೆ. ಈ ದೃಷ್ಟಿಯಿಂದ ಅದನ್ನು,ಧಾರವಾಡದ ಪಾರಿಭಾಷೆಯಲ್ಲಿ ಅಶ್ವತ್ಥಮ್ಮನೆಂದರೂ ಸಮನೆ, ವಿಧುರಾಶ್ವತ್ಥವೆಂದು ಪತ್ನಿ ವಿಯೋಗಕ್ಕೆ ಗುರಿಪಡಿಸಿದರೂ ಸಮನೆ. ನನ್ನ ಮತ್ತದರ ಮಿಲಾವಣೆಯನ್ನು ಕುರಿತು ಬಿನ್ನವಿಸುತ್ತಿರಲು ಪರಾಂಬರಿಸತಕ್ಕದ್ದು :

ಈ ಮರದ ವಿಷಯವಾಗಿ ಹೇಳುವಲ್ಲಿ, ನಾನು ನನ್ನ ಮದುವೆಗಿಂತ ಮೊದಲು 'ಬ್ರಹ್ಮಚಾರಿ'ಯಾಗಿದ್ದೆ-ಎಲ್ಲರಂತೆ. ಆಗೇನೂ ಯುದ್ಧ ಬಂದಿರಲಿಲ್ಲ. ರೇಜರು ಬ್ಲೇಡುಗಳ ಅಭಾವವಿಲ್ಲದಿದ್ದರೂ ನಾನೇನೋ ನನ್ನ ಮುಖಾರವಿಂದವನ್ನು ಗಡ್ಡೋದ್ಯಾನದಿಂದ ಬೆಳಗಿಸಿದ್ದೆ. ಅಂದ ಮೇಲೆ ಆಗಿನ ಕಾಲಕ್ಕೆ ನಾನೊಬ್ಬ ಸಾಧುವೆನ್ನಲು ಈಗಂತು ಅಡ್ಡಿ

ಯಿಲ್ಲ. ಊರೂರು ಅಲೆದಾಟ, ಸಂಜೆಯಾದಲ್ಲೇ ಶಯನೋತ್ಸವ.

ಹೀಗಿರುವಲ್ಲಿ—ಒಂದು ದಿನ ನಮ್ಮ ಜಿಲ್ಲೆಯ ನೆರೆಯೂರೊಂದರಲ್ಲಿ, ಹಾಳೂರೊಂದರ ಹೆಬ್ಬಾಗಿಲಲ್ಲೆ ಸಂಜೆವೆಣ್ಣಿನ ಮುಖಸಂದರ್ಶನ ನನಗಾಯಿತು. ಅಂತೆಯೇ ಊರನ್ನು ಹೋಗದೇನೆ, ಹೊರಗೇನೆ ಕಾಣಿಸಿದ ಕಟ್ಟೆಯೊಂದರ ಮೇಲೆ ನನ್ನ ಬೀಡು ಬಿಟ್ಟೆ. ಅದೇ ಸಮಯಕ್ಕೆ, ಅಲ್ಲಿಗೇನೆ,ಇಬ್ಬರು ಬಾವಾಜಿಗಳು ಬಂದರು. ನನಗೂ ಅವರಿಗೂ ಕಾಣಿಸಿದ ಸಾಮ್ಯವೆಂದರೆ ಗಡ್ಡಮೀಸೆಗಳು ಮಾತ್ರ. ಆದರೆ ಅವರು ನನ್ನನ್ನು ಬಾವಾಜಿಯಾಗಿಯೇ ತಿಳಿದಿದ್ದರೆಂದು ಯಾರು ಬಲ್ಲರು! ಅವರಲ್ಲೊಬ್ಬನು ನನ್ನನ್ನು ಹಿಂದುಸ್ಥಾನಿಯಲ್ಲಿ ಮಾತನಾಡಿಸಿದನು. ನಾನು ಮೂಕನಾಗಿ ಕುಳಿತೆ. ಅದರಿಂದಲೂ ನಿರಾಶಿತರಾಗದೆ ಸಾಂಕೇತಿಕ ಹಾವಭಾವಗಳಿಂದ 'ಗಾಂಜಾ ಇದೆಯೇ?' ಎಂದು ಕೇಳಿದರು. ನಾನು ರೇಗಿ 'ನಾನು ಗಾಂಜಾಬಡಕನಲ್ಲ—ಬ್ರಹ್ಮಚಾರಿ' ಎಂದೆ. ಅವರು ತಾವಾದರೂ ಹಾಗೆ—ಎಂದು ಉತ್ತರಿಸಿಬಿಟ್ಟರು. ನಾನು ಅಲ್ಲಿಂದ ಎದ್ದೇಳುವ ಮನಸ್ಸು ಮಾಡಿದೆ. ಆದರೆ ತೀರ ಅಶಿಷ್ಟ ಸಾಂಪ್ರದಾಯಃವಾದೀತೆಂದು ಪಡುವಣಕ್ಕೆ ಮುಖಮಾಡಿ, ಸಂಜೆವೆಣ್ಣಿನ ಒಕ್ಕಣ್ಣ ನೋಟಕ್ಕೆ ಮರುಳಾದವನಂತೆ, ಕುಳಿತೆ. ಅವರು ಅದನ್ನು ಗಮನಿಸದೆ ತಮ್ಮ ಕಂಬಳಿ ಹಾಸಿ, ಕಾಲು ನೀಡಿದರು. ತಮ್ಮ ಕಂತೆಯಿಂದ ಚಿಲುಮೆ, ಗಾಂಜಾಗಳನ್ನು ಹೊರತೆಗೆದರು. ಏನೇನೋ ಮಾತನಾಡುತ್ತ—ಗಾಂಜ ತೀಡಿ, ತಿಕ್ಕಿ, ಉರಿಸಿಬಿಟ್ಟರು. ಕತ್ತಲಾಗುವಾಗ ನಮ್ಮ ಕಟ್ಟೆಯು ಗಾಂಜಾ ವಾತಾವರಣದಿಂದ ಕವಿದುಹೋಗಿತ್ತು. ನಾನು ಮಲಗಿಕೊಂಡು ನಿದ್ದೆ ನಟಿಸಿದೆ. ಅವರು ಹರಟುತ್ತಲೇ ಇದ್ದರು.

ನನಗೇನೋ ನಡೆದ ದಣಿವಿನಿಂದ ಬಲು ಬೇಗ ನಿದ್ದೆ ಬಂದಿತು. ಎಚ್ಚರವಾಗುವಾಗ ನಡುರಾತ್ರಿಯಾದರೂ ಸರಿದಿರಬಹುದು. ಆಚೀಚೆ

ನೋಡಿದೆ. ಮಗ್ಗುಲಲ್ಲೇ ಗಾಂಜಾಬಡಕರು ಮಲಗಿ ಗೊರೆಯುತ್ತಿದ್ದರು. ಇಂಥವರ ಸಹವಾಸ ಬೇಡವೆಂದು, ದಡಬಡಿಸಿ, ಅಲ್ಲಿಂದ ರಸ್ತೆಗೆ ಇಳಿದು ಹಾಳೂರ ಬೀದಿಯಲ್ಲಿ ಮುಂದುವರಿದೇ ಬಿಟ್ಟೆ!

ದೀವಿಗೆಗಳೂ ಕಾಣಿಸಲಿಲ್ಲ, ಮಾಡಿಲ್ಲದ ಮನೆಗಳು! ಊಳುವ ನಾಯಿಗಳೂ ಇಲ್ಲ, ಘೂಂಕರಿಸುವ ಗೂಬೆಗಳೂ ಇಲ್ಲ. ಹಾಳೂರಿನ ಬಳಿಕ ಬಂದುದೊಂದು ಬಯಲು; ಬಲು ವಿಸ್ತಾರದ ಬಯಲು. ಬರಿ ಬಯಲಲ್ಲಿ ತಂಗಿದರೆ, ಹಿಮ ಹಾಸೀತೆಂದು ಅಂಜಿ, ಮುಂದೊಂದು ಮರವಾದರೂ ಕಾಣಸಿಗಲಿ—ಎಂದು ಸಾಗಿದೆ. ನನ್ನಾಸೆ ಸಫಲವಾಯಿತು. ತುಸು ದೂರ ನಡೆಯುತ್ತಲೇ, ಬಲು ವಿಶಾಲವಾದ ಒಂದು ತೋಪೇ ಕಾಣಿಸಿತು. ಅದರ ಬಳಿಗೆ ಹೋದೆ; ಕ್ಷೀಣ ಬೆಳಕಿನಲ್ಲಿ ಆ ತೋಪಿನ ಮರಗಳೆಲ್ಲ ವಿಶಾಲವಾದ ಸಭಾಮಂಟಪದ ಕಂಬಗಳಂತೆ ತುಂಬಿನಿಂತಿದ್ದುವು. 'ಛೀ— ಇಲ್ಲಿಗೆ ಬಾರದೇ, ಅಲ್ಲೇ ಉಳಿದೆನೇ' ಎಂದು ಪಶ್ಚಾತ್ತಾಪವೂ ಆಯಿತು. ಸರಿ ತೋಪಿನ ನಡುವನ್ನು ಸೇರಿ, ಹೊದೆದ ಶಾಲನ್ನು ಹಾಸಿ, ತೋಳನ್ನು ತಲೆದಿಂಬಾಗಿ ಮಡಚಿ, ತೂಗುವ ನಿದ್ದೆಗೆ ಉಯ್ಯಾಲೆ ರಚಿಸಿಕೊಟ್ಟೆ. ಬಸ್ಸೆಂದು ನನಗೆ ನಾನೇ ಜೋಗುಳವನ್ನು ಹಾಡಿ ಮಲಗಿಬಿಟ್ಟೆ.

ಆ ಮರದ ಕೆಳಗಡೆಯಿಂದ ಶೀತಗಾಳಿಯು ಬೀಸುತ್ತಿತ್ತು. ಕ್ರಮೇಣ, ಹಾಸಿದ ಅರಿವೆಯನ್ನು ಹೊದೆಯುವ ಪಾಡೂ ಬಂದಿತು. ಚಳಿಯಿಂದ ನಿದ್ದೆ ಎಚ್ಚರಗಳ ಆವರ್ತನೆಗೆ ಬಲಿಯಾಗುತ್ತಿರಲು, ಹನಿ ಉದುರುವಂತೆ ಏನೇನೋ ನನ್ನ ಶರೀರದ ಮೇಲೆ 'ಪಟ ಪಟ' ಉದುರುತ್ತಿತ್ತು. ಆ ಅಮಲಿನಲ್ಲಿ ಅದರ 'ಪಂಚನಾಮೆ' ಮಾಡಲು ಯಾರು ಕುಳಿತಿರಬೇಕು? ಇತ್ತ ಹವೆಯು ಇನ್ನಷ್ಟು ಶೀತವಾಯಿತು. ದೂರದ ದಿಗಂತದಿಂದ ಎಳೆಮಿಂಚು ಹೊಳೆಯತೊಡಗಿತು. ಮಳೆ ಬಂದೀತೆ—ಎಂಬ

ಅನುಮಾನವಾಯಿತು. ಇತ್ತ, ಮೇಲಿಂದ ಉದುರುವ ಹನಿಗಳು ಉದುರುತ್ತಲೇ ಇದ್ದುವು. ಮುಖಕ್ಕೊಂದೆರಡು ಬಾರಿ, ತುಟುಕಿದಾಗ ಮಾತ್ರ ನನ್ನ ಮೂಗು ಮುರಿದಿರಬೇಕು—ಆದರೂ ನಿದ್ದೆಯ ಬಲವತ್ತರದಿಂದ 'ಅಕ್ಲೈಭ್ಯೋ, ಅದಾಹ್ಯೋ....' ಇತ್ಯಾದಿಯಾಗಿ ಮಲಗಿದೆ. ನನ್ನ ಹೊದೆದ ವಸ್ತ್ರ ಪೂರ್ಣ ತೊಯ್ದಂತೆ ಕಾಣಿಸಿತು; ಸಾಲದುದಕ್ಕೆ ನನ್ನ ಅರಿವೆಯಿಂದ ಅನೇಕ ಬಗೆಯ 'ವಾಸನಾ' ಫಲಗಳು ಕಾಣಿಸತೊಡಗಿದವು. ಜುಗುಪ್ಸೆಯಿಂದ ಅರಿವೆಯನ್ನು ಕಿತ್ತೆಸೆದು ಕುಳಿತೆ! ಆದರೆ ಸುತ್ತಲೂ ಪಟ ಪಟಾಯಮಾನ ವಾಗುತ್ತಲೇ ಇದ್ದುದರಿಂದ, ಅದೇ ಅರಿವೆಯನ್ನು ತಲೆಗೇರಿಸಿ ತಲೆಮರೆಸಿಕೊಳ್ಳುವೆನಾಗಿ ನಿರ್ಧರಿಸಿದೆ. ಆಗ ನನ್ನ ಆತ್ಮಾನುಭವ ಹೇಳಲಳವಲ್ಲ! ಈಪಿಷ್ಟವೃಷ್ಟಿಯನ್ನು ಸಹಿಸಲಾರದೆ, ಹೊರಡುವೆನಾಗಿ ಎಣಿಸಿದೆ. ಬಾನು ತಾರಾಶೂನ್ಯವಾಗಿತ್ತು; ಮಿಂಚು ತೀರ ಕ್ರೂರವಾಗಿ ಬಡಿಯತೊಡಗಿತು. ಅಪೂರ್ವದ ಬಿರುಗಾಳಿಯೊಂದು ಕಣ್ಣಿಗೆ ಮಣ್ಣೆರಚಿ, ನನ್ನನ್ನು ಮತ್ತಷ್ಟು ದಿಕ್ಕುಗೆಡಿಸಿತು.

ಬಾವಾಜಿಗಳಿಂದ ಬಚಾಯಿಸಲು ಇಲ್ಲಿಗೆ ಬಂದು ನನ್ನ ಗತಿಯೇನಾಯಿತು—ಎಂದು ಎಣಿಸುವ ವೇಳೆಗೇನೆ, ಅತಿ ಅದ್ಭುತವಾದ ಸಿಡಿಲೊಂದು ನೆಲವನ್ನು ಅದುರಿಸಿತು. ಅದರ ಕ್ರೂರ ಬೆಳಕಿನಲ್ಲಿ, ನಾನು ನಿಂತ ತಾವಿನ ಮರಗಳೆಲ್ಲವೂ 'ಜುಮ್ಮೆಂದು' ಕಾಣಿಸಿದುವು. ಅವೆಲ್ಲ ಒಂದೇ ಮರದ ಬೀಳಲುಗಳೆಂಬ, ಕ್ಷಣಿಕ ಪರಿಜ್ಞಾನದ ಬೆಂಗಡೆಯಲ್ಲಿ ಸಾವಿರ ದೆವ್ವಗಳು ನನ್ನ ಮುಂದೆ ನಿಂತಂತೆ ತಿಳಿವಾಯಿತು. ಆ ಸಿಡಿಲಿನ ಆರ್ಭಟೆಗೆ—ಮರದ ಮೇಲ್ಗಡೆಯಲ್ಲಿ ಸಾವಿರಾರು ಪಕ್ಷಿಗಳು ಅಸ್ಥಿರವಾದುವು, ಹಾರಾಡಿ ಚೀರಿಕೊಂಡವು. ಗೂಬೆ, ಬಾವಲಿ, ಕುರುಲೆ—ಯಾವಜ್ಜಾತಿಯ ಧ್ವನಿಕೂಟಗಳು, ನೆರಳು ಬೆಳಕುಗಳ ನೋಟಕ್ಕೆ ಮೇಳವಿಸಿ—ಅದೊಂದು 'ಸ್ಮಶಾನ ಕುರುಕ್ಷೇತ್ರ'ವೆಂಬ ಕಲ್ಪನೆಯನ್ನು

ತಂದಿಟ್ಟುವು. ಸಾಲದುದಕ್ಕೆ ನೋಟದ ಭೀಕರತೆಗೆ ಸಮನಾದ, ಗಂಧವೂ ಸೇರಿದುದರಿಂದ — ನನ್ನ ಜುಗುಪ್ಸೆಯೂ ಬೆಳೆಯಿತು.

ಮರುಕ್ಷಣವೇ ಚಿಟಿಚಿಟಿ ಮಳೆಯು, ಭೋರ್ಗರೆಯುವ ಗಾಳಿಯೊಡನೆ ಕುಣಿಕುಣಿದು ಬರತೊಡಗಿದುದರಿಂದ, ಆ ದಟ್ಟವಾದ ಪತ್ರಲೋಕವನ್ನು ನುಗ್ಗಿಯೂ ಹನಿಗಳು ನನ್ನ ಮೇಲೆ ಉದುರಿದುದರಿಂದ ಸ್ನಾನದಿಂದ, ಶುದ್ಧನಾಗುವೆನೆಂದು ತಿಳಿದೆ! ಅದೂ ಐದು ನಿಮಿಷಕಾಲ! ಮಳೆಯ ಜಡಿತ ಅಳತೆಗೆ ಮೀರುತ್ತಲೇ, ಶರೀರವು ಆ — ಕರುಳು ಪರಿಯಂತ ನಡುಗತೊಡಗಿತು.

ಮಳೆಯು ಶಾಂತವಾಗಲು, ಆ ತಾಣಕ್ಕೇನೆ ಪುನರ್ಜನ್ಮ ಉಂಟಾಯಿತು. ಸ್ನಾನದಿಂದ ನನಗಂತು ದ್ವಿಜತ್ವ ಬಂದೇ ಬಂತು. ಅತ್ತ ಸಿಡಿಲಿನ ಆರ್ಭಟೆಗೆ ಪಕ್ಷಿಗಣವೂ ಮಾಯವಾದಂತೆ ಕಾಣಿಸಿತು. ಬರಿಯ ನೀರಿನ ತುಟುಕುಗಳಲ್ಲೇ ನಭೋಸೀಮೆಯ ದಾಳಿ ತೃಪ್ತಿಗೊಂಡಿತು. ನಾನು, ಆಗಾಗ ಬರುವ ಮಿಂಚಿನ ಬೆಳಕಿನಲ್ಲಿ ಆ ಸ್ಥಳವನ್ನು ಪರಿಶೀಲಿಸತೊಡಗಿದೆ. ಕುಳಿತಿರಲು ಏರಿನ ಬೇರೊಂದು ಸಿಗಲಾರದೇ — ಎಂದು ಅರಸಿದೆ. ಅರಿವೆ ಕಳಚಿ, ಅಂಥದೊಂದು ಬೇರನ್ನು ಆರಿಸಿ, ಉದಾಸೀನನಾದೆ! ಹೇಗೂ ನಿದ್ರೆ ಬರುವಂತಿರಲಿಲ್ಲ. ಯೋಚನಾಪರನಾಗುವೆನೆಂದು ಬಯಸಿದೆ. ಮನುಷ್ಯನಿಗೆ— ಯೋಚನೆಯಿಂದ ಬರುವಷ್ಟು 'ಅಶಾಂತಿ' ಇನ್ನಾವುದರಿಂದಲೂ ಬಾರದೆಂದು ಮೇಲಿಂದ ಮೇಲೆ ತಿಳಿದೂ, ತಿರುಗಿ ಅದೇ ಚಾಳಿಗೆ ನಾನು ಬಲಿಯಾಗಬೇಕೇ?

"ಇದೇನು ಮರ? ಒಂದೇ ಮರ ತೋಪಿನಂತೆ ಕಾಣಿಸಿಬಿಟ್ಟಿತಲ್ಲ! ಇದು ಅಲ್ಲವೇ? ಅಶ್ವತ್ಥವೇ" — ಎಂದು ತರ್ಕಿಸಿದೆ. ತರ್ಕದ ಪ್ರಾರಂಭಕ್ಕೇನೆ, ನನ್ನ ಅಜ್ಜಿ ನನಗೆ ಎಳೆತನದಲ್ಲಿ ಊಡಿಸಿದ 'ಬ್ರಹ್ಮರಾಕ್ಷಸ'ನ ಕಲ್ಪನೆ ಕೆರಳಬೇಕೆ? ಅದರಿಂದ ಬೇಡೆಂದರೂ ಬೆದರಿಕೆಗೆ ಪ್ರಾರಂಭ.

ಮಿಂಚಿನ ಬೆಳಕಿಗೆ ಮರದ ಬೀಳಲುಗಳು ಬೇತಾಳಗಳಾಗುವುದನ್ನು ಕಾಣಲಾರದೆ, ಬೆಕ್ಕಿನಂತೆ ಕಣ್ಮುಚ್ಚಿ ಕುಳಿತೆ! ಒಮ್ಮೆ ಮಿದುಳು ಕೆರಳಿಬಿಟ್ಟರೆ, ಅದರ ಬೆಳಕಿನ ದೊಂದಿಯನ್ನು ಅದೇ ಹಿಡಿಯುತ್ತದೆ. ನಾನು ರೆಪ್ಪೆ ಮುಚ್ಚಿದರೂ—ಆ ಬೇರುಗಳು, ಬೀಳಲುಗಳು, ಕೊಂಬೆಗಳ ಚಪ್ಪರ—ಇವುಗಳು ಒಂದು ರಕ್ಕಸಲೋಕವಾಗಿ ತಮ್ಮನ್ನು ಮಾರ್ಪಡಿಸಿಕೊಂಡುವು.

ಇದು ಆಲದ ಮರವಲ್ಲ—ಅಶ್ವತ್ಥ ವೃಕ್ಷ. ಅಶ್ವತ್ಥದಲ್ಲಿ ಬರಿಯ ಬ್ರಹ್ಮರಾಕ್ಷಸ ಮಾತ್ರ ನೆಲಸೀತು,ನಾನು ಬ್ರಹ್ಮಚಾರಿ—ಎಂದು ಧೈರ್ಯ ತಂದು, ಜನಿವಾರ ಹಿಡಿದುಕೊಂಡು, ಒಂದರ ಮೇಲೊಂದಾಗಿ ಗಾಯತ್ರಿಗಳನ್ನು ಎಸೆಯತೊಡಗಿದೆ. ಆದರೆ ಚಳಿಯಿಂದಲೋ, ಭೀತಿಯಿಂದಲೋ ನಡುಗುತ್ತಿದ್ದ ನನ್ನ ತುಟಿಗಳಿಗೆ ಸ್ವರೋಚ್ಚಾರಣೆಯ 'ತಾಕತ್ತು' ಶೂನ್ಯವಾಯಿತು. ಯಾಕೋ—ನಾನು ಕುಳಿತ ಬೇರೂ ಒರಗಿದ ಕಾಂಡವೂ ಒಮ್ಮೆಗೇ ಅದುರಿದಂತೆ ಭಾಸವಾಯಿತು. ತಿರುಗಿ ನೋಡಲು ಆ ಮರವೇ, ಯಾವತ್ತು ವೃಕ್ಷವೇ ನಡುಗಿತು. ಅದರ ಎಡೆಯಿಂದ ನನ್ನೆದುರಿಗೆ, ಬಿಳಿಯ ಉತ್ತರೀಯವನ್ನು ಧರಿಸಿದ ಬೃಹದಾಕಾರದ ಬ್ರಹ್ಮಚಾರಿಯು ಬಂದಂತೆ ಕಾಣಿಸಿತು! ನನ್ನ ನೆತ್ತರು ಹಿಮವಾಯಿತು! ಆದರೆ ಆ ಮೂರ್ತಿಮಾತ್ರ ನನ್ನನ್ನು ನೋಡಿ ಕಿಲಕಿಲನೆ ನಕ್ಕಿತು! ನಾನು ಬಲವಾಗಿ ಆ ಮೂರ್ತಿಯನ್ನು ಮರೆಯಲು ಯತ್ನಿಸಿದೆ;ಅದರ ಧ್ವನಿಯು ಬಾವಲಿಗಳ ಚೀರಾಟವೆಂದು ತಿಳಿಯಲು ಯತ್ನಿಸಿದೆ. ಆದರೆ ನನಗೆ ಸೋಲಾಯಿತು. ಕೊನೆಗೆ ತೀರ ಹತಾಶನಾಗಿ 'ಅಯ್ಯೋ' ಇಲ್ಲಿಗೇಕೆ ಬಂದೆ?' ಎಂದು ಉದ್ಗರಿಸಿ, ಓಟ ಕಿತ್ತೆ! ನಾಲ್ಕು ಹೆಜ್ಜೆ ಪೂರ್ಣ ಸಾಗಲಿಲ್ಲ—ನನ್ನ ಹಣೆಗೂ ಮರದ ದಿಂಡೊಂದಕ್ಕೂ ಸಂಧಾನವಾಗಿ ನಾನು ನೆಲವನ್ನಳೆದೆ! ನನ್ನ ಲಲಾಟಕ್ಷೇತ್ರದಲ್ಲಿ ಫಣೆಗಣ್ಣೊಂದು ತೆರೆದು ನೆತ್ತರು

ಕಾರಿತು. ನಾನಾಗ ಎಳೆಮಗುವಿನಂತೆ ಅಳತೊಡಗಿದೆ.

"ಅಳಬೇಡ, ಬೆಳೆದ ಮಗುವೇ, ನಿನ್ನನ್ನು ನಾನು ಕಾಡುವುದಿಲ್ಲ-ಗಾಬರಿಯಾಗಬೇಡ"—ಎಂದಿತೊಂದು ದನಿ. ನನ್ನ ರೋದನ ನಿಲ್ಲದ್ದನ್ನು ಕಂಡು, ನನ್ನ ಮೈ ಸವರಿ, ನನ್ನನ್ನು ಆನಿಸಿ ಹಿಡಿದಂತೆಯೂ ಆಯಿತು. ಆಶ್ಚರ್ಯವೆಂದರೆ—ಅದರ ಕೈಸೋಂಕಿನಿಂದ ನನ್ನ ಭೀತಿಯು ಶಾಂತವಾದುದು; ಕರುಳು ಕುದುರಿ ನಿಲುಗಡೆಗೆ ಬಂದುದು.

ಆದರೂ ನಾನು ಮೂಕನಾಗಿಯೇ ಕುಳಿತೆ. 'ನಾನಾರು, ಎಲ್ಲಿರುವೆ, ಇದು ಕನಸೇ?' ಎಂದು ಬಲು ಬಗೆಯಿಂದ ನನ್ನನ್ನು ನಾನು ಎಚ್ಚರಿಸಿಕೊಳ್ಳಲು ಯತ್ನಿಸಿದೆ. ಆದರೆ ನನ್ನ ಮನಸ್ಸಿನ ಈ ಪ್ರಶ್ನೆಗಳನ್ನೇ ಅದು ಉತ್ತರಿಸುವಂತೆ ಕಾಣಬೇಕೆ? "ನಿನಗೆ ಎಚ್ಚರವಿದೆ. ನೀನು ನನ್ನ ಬಳಿಯಿರುವೆ. ಬೆಳಕು ಹರಿಯುವ ತನಕ ಇಲ್ಲೇ ಇರಬೇಕು. ಅದರೊಳಗಾಗಿ ನಿನ್ನೊಡನೆ ನಾನು ಮಾತನಾಡಲೇಬೇಕಾದ ಕೆಲಸವಿದೆ. ನಿನಗೆ ನಾನೇನು ಹಾನಿಮಾಡಲಾರೆ; ಬದಲು ನಿನ್ನಿಂದ ನನಗೊಂದು ಉಪಕೃತಿಯಾಗಲಿದೆ" ಎಂದಿತು.

ನನಗೆ ಆಶ್ಚರ್ಯವಾಗದಿದ್ದೀತೆ? ನನ್ನಿಂದ ಆ ಅಮಾನುಷ ಜೀವಕ್ಕೆ ಉಪಕೃತಿಯೇ! "ಹೂಂ—ಇತರ ದೆವ್ವಗಳಂತೆ ಇದಕ್ಕೂ ಒಂದು 'ಚರ್ಮ' ಶ್ಲೋಕದ ಬಯಕೆಯಾಗಿರಬೇಕು. ಅದಕ್ಕೇನೆ ಅರೆಸಾಹಿತಿಯಾದ ನನ್ನನ್ನು ಇದು ತುರುಬಿ ಹಿಡಿದಿದೆ" ಎಂದು ತಿಳಿದೆ. ಆದರೆ ಅದನ್ನು ಉಪೇಕ್ಷಿಸಿ ಕೆರಳಿಸುವುದು ಸಮನಲ್ಲೆಂದು, ವಿನಯಶೀಲನಾಗಿ, ಒಮ್ಮೆ ಪಾರಾಗಲೆತ್ನಿಸುವೆನೆಂದು ಕೊಂಡೆ: "ಅಪ್ಪಾ, ಅಲ್ಲ.... ಅಯ್ಯಾ, ಅಲ್ಲ.... ತಂದೆಯೇ, ನೀನಾರು? ಬಡ ಬ್ರಹ್ಮಚಾರಿಯಾದ ನನ್ನಿಂದ ನಿನ್ನ ಸೇವೆಯೇನು ಸಾಧ್ಯ? ಆದರೂ ನೀನೆನ್ನುವುದನ್ನು ಕೇಳುತ್ತೇನೆ, ಒಂದು ಶರ್ಯತ್ತಿನ ಮೇಲೆ! ನೀನು ನಿನ್ನ ರೂಪವನ್ನು ಮರೆ-

ಯಲ್ಲಿರಿಸಿ, ಬರಿದೆ ಅಶರೀರಿಯಾಗಿ ನನ್ನನ್ನು ಮಾತನಾಡಿಸಬೇಕು."

"ಆಗಲಿ—ಹಾಗೆಯೇ ಮಾಡುವೆ. ಆದರೆ ನೆಟ್ಟಗೆ ನಿನ್ನೊಡನೆ ನನಗೆ ಬೇಕಾದುದೇನೆಂದು ಹೇಳಲು, ನಿನಗೆ ನನ್ನ ಹಂಬಲದ ಅರ್ಥ ಆಗಲಾರದು. ಅದರಿಂದ ನನ್ನ ಜನ್ಮವೃತ್ತಾಂತವನ್ನು ಮೊದಲು ಹೇಳಬೇಕು. ಅದನ್ನು ಚುಟುಕಿನಲ್ಲಿ ವಿವರಿಸುವೆ. ಆಗ ಮಾತ್ರ ನಿನಗೆ ಅಮಾನುಷನಾದ ನನ್ನಲ್ಲಿ ವಿಶ್ವಾಸವುಂಟಾದೀತು."

"ಸರಿಯೇ. ಮೊದಲು ನೀನಾರು ಹೇಳು—ಆಲವೇ, ಅಶ್ವತ್ಥವೇ, ಬಹ್ಮ-ರಾಕ್ಷಸನೇ ಅಥವಾ........"ಎಂದು ಹೆಸರಿಗಾಗಿ ತಡವಿದೆ.

"ನಾನು ಆಲವಲ್ಲ, ಅದೇ ಬಳಗದವ—ಅಶ್ವತ್ಥ. ಅಶ್ವತ್ಥನಾರಾಯಣ ಎಂಬುದು ನನ್ನದೊಂದು ಹೆಸರು."

"ಆದರೆ ಇಷ್ಟೊಂದು ಬೀಳಲುಗಳಿಂದ ತುಂಬಿ ತೋಪಿನಂತೆ ಕಾಣುವಿಯಲ್ಲ?"

"ಅದೇ—ನನ್ನ ಜತೆಗೆ ಅವಳಿಯಂತೆ ಬೆಳೆದದೊಂದು ಆಲದ ಮರದ ಸಹವಾಸದಿಂದ. ಈ ತಾಣವನ್ನೆಲ್ಲ ಅದೇ ಆವರಿಸಿದೆಯಾದರೂ ನಾನೇ ಇಲ್ಲಿನ ಕೇಂದ್ರ ವ್ಯಕ್ತಿ. ನನ್ನಿಂದಾಗಿ ಅದಕ್ಕೆ ಮನ್ನಣೆ, ನಾಳೆ ಕೇಡು ಬಂದರೆ ಅದರಿಂದಾಗಿ ನನಗೂ ಬಂದೀತು."

"ಹಾಗಾದರೆ ನೀನು ಬ್ರಹ್ಮರಾಕ್ಷಸನಂತು ಅಲ್ಲ. ಯಾವನೋ ಮಡಿದ ಬ್ರಹ್ಮಚಾರಿಯ ಪ್ರೇತವಲ್ಲ. ನಾನೀಗ ಮದುವೆಯಿಲ್ಲದೆ ಸತ್ತರೆ ನೀನಾಗ ಬೇಕಿಲ್ಲ—ಅಲ್ಲವೆ?"

"ಛೀ, ಮರುಳೇ! ಬ್ರಹ್ಮನು ರಾಕ್ಷಸನಾಗುತ್ತಾನೆಯೇ? ಅಥವಾ ನೀನು ನಾನಾಗುವುದುಂಟೇ? ಇರಲಿ—ನೀನು ಬ್ರಹ್ಮಚಾರಿಯೇ?"

"ಹೂಂ—ಟೆಂಪರರಿ ಹುದ್ದೆಯದು. ಈಗ ಮದುವೆಯ ಹಂಬಲವಾಗಿದೆ. ಅಂದರೆ ಮನುಷ್ಯನಾದವನು ಒಂದಾದರೂ ಗಂಡುಹುಳವನ್ನು

ಹೆರದೆ ಹೋದರೆ ಅವನಿಗೆ ಮುಕ್ತಿಯಿಲ್ಲ ಎನ್ನುತ್ತಾರಲ್ಲ?"

"ಹೋ, ನಿಮ್ಮಲ್ಲಿ ಹಾಗೊಂದು ನಂಬಿಕೆ ಉಂಟಲ್ಲಿವೇ! ಆದರೆ ನೀನು ಲಗ್ನವಾದೆಯೆಂದರೆ, ಮೊದಲು ನಿನ್ನ ಹೆಂಡತಿಯು ಕೈಯಿಂದ ಮುಕ್ತಿದೊರೆಯ ಬೇಕಲ್ಲ! ಮೇಲೆ ನಿನ್ನ ಸಂತಾನಕ್ಕೆ ದಾರಿದ್ರ್ಯದಿಂದ ಮುಕ್ತಿಸಿಗಬೇಕಲ್ಲ?"

ಈ ಪ್ರೇತವು ನನ್ನ ಧಾರ್ಮಿಕ ರಾಜ್ಯದಿಂದ ಮೆಲ್ಲಗೆ ಸೋಶಿಯೋಲಜಿ, ಅರ್ಥಶಾಸ್ತ್ರಗಳ ಕಡೆಗೆ ಒಯ್ಯುವುದೆಂಬ ಭೀತಿಯಾಯಿತು. ಅದಕ್ಕೆ ತಡೆಬರುವಂತೆ 'ಅದೆಲ್ಲ ಸ್ವರಾಜ್ಯ ದೊರೆತ ಬಳಿಕ ಸಮನಾಗುವುದೆ'ಂದು ಹೇಳಿ, ಗಾಂಧಿ ಶಿಷ್ಯರ ರಾಮಬಾಣವನ್ನು ಬಿಟ್ಟುಬಿಟ್ಟೆ. ಮುಂದೆ "ನೋಡು, ನಿನ್ನ ಕತೆ ಉದ್ದವಿರಬಹುದು. ಬೆಳಕು ಹರಿಯುವುದರೊಳಗೆ ನೀನು ಹೇಳಿಬಿಡಬೇಕಲ್ಲ? ನನ್ನ ಕತೆಯನ್ನು ಬಿಟ್ಟು, ನೀನು to the pointಗೆ ಬಂದುಬಿಡು. ನೇರಾಗಿ ನೀನಾರು, ನಿನ್ನ ತವರೂರಾವುದು, ಈಗೇನಾಗಿರುವೆ, ನಿನಗೆ ನನ್ನಿಂದೇನಾಗಬೇಕು— ಎಂದು ಹೇಳಿದಲ್ಲಿ........"

"ನನ್ನ ತವರೇ? ನಾನು ಆರ್ಯಾವರ್ತದವನು. ಆರ್ಯಾವರ್ತದ ಕೃಷ್ಣಪರಮಾತ್ಮ ತನ್ನನ್ನು ನನಗೆ ಹೋಲಿಸಿಕೊಂಡುದರ ನೆನಪಿಲ್ಲವೇ?

ಹೂಂ, ಬಲ್ಲೆ—ಆರ್ಯರ ವಿಚಾರ. ಅವರೇ ಅಲ್ಲವೆ, ನಮ್ಮ ದೇಶದವರನ್ನು ದಸ್ಯುಗಳೆಂದು ಮೂದಲಿಸಿದವರು? ಕೆಲಸಕ್ಕೊದಗಿದ ಕೃಷ್ಣನು ಕರಿಯನಾದರೂ, ಅವನನ್ನು ಆರ್ಯನೆಂದವರು! ಆದರೆ ನಮ್ಮವರನ್ನು, ಕನ್ನಡಿಗರನ್ನು, ಕೋತಿಗಳೆಂದು ಕರೆಯಲು ಹೇಸಲಿಲ್ಲ."

"ನೀನು ಆಗಿನ ಕಾಲವನ್ನು ನೆನೆಯುತ್ತಿದ್ದೀಯಾ? ರಾಮಾಯಣದ ಕತೆ ಹೇಳುತ್ತೀಯಾ?"

"ಯಾವ ಕಾಲವಾದರೇನು? ಉತ್ತರದವರಿಂದ ದಕ್ಷಿಣದವರಿಗೆ

ಎಂದು ಮನ್ನಣೆ ದೊರೆಯಿತು? ರಾಮನಿಗೆ ನೆರವಾದ ದಕ್ಷಿಣದವರು ವಾನರರೆನಿಸಿದರು. ಕೌರವ ಪಾಂಡವರ ಅಗ್ನಿಹೋತ್ರದಲ್ಲಿ ಇಲ್ಲಿನವರು ಕುರಿಗಳೆನಿಸಿದರು. ಈಗಲೂ ಹಾಗೇನೆ–ಉತ್ತರದವರ ಹಿಂದೀರಾಜ್ಯ ಉತ್ತರದವರ 'ನೇತಾ'ತನ, ಉತ್ತರದವರ ವ್ಯಾಪಾರೀ ಕೊಳ್ಳೆ!"

ನಾನು ನನ್ನ ಉಪನ್ಯಾಸ ತೊಡಗಿದೆನೆಂದು ಅದಕ್ಕೆ ಅಂಜಿಕೆಯಾಯಿತೋ ಏನೋ. ಅದು–

"ಅಂತಹ ಹಳೆಯ ನೆನಹಿಂದ ನನ್ನಮೇಲೆಯೂ ದುರಾಗ್ರಹ ಪಡ ಬಾರದು, ನನ್ನ ತವರೂರು ಅದು ನಿಜ. ಆದರೆ ನಾನು ಜನ್ಮವೆತ್ತಿದ್ದು ಇಲ್ಲಿ. ಬೀಜವಾಗಿ ಬಂದು ಬೆಳೆದುದು ಇಲ್ಲೇನೆ."

"ಆರ್ಯಾವರ್ತದಿಂದ ಇಲ್ಲಿಗೆ-ಮಾರವಾಡದವರು ಮಧುರೆಗೂ ಬರುವಂತೆ!"

"ಛೀ–ಹಾಗೆನ್ನಬೇಡ. ಯಾವುದೋ ದಕ್ಷಿಣಾಭಿಮುಖಿಯಾದ ಪಕ್ಷಿಯನ್ನು ಸೇರಿ, ಹಾರಿ ಬಂದು, ಇದೇ ತಾವಿನಲ್ಲಿದ್ದ ಏರು ಬಂಡೆಯೊಂದರ ಮೇಲೆ ಸ್ಥಾಪಿತನಾದೆ. ಅಂದಿನ ನನ್ನ ಹುಟ್ಟು ನಿನ್ನವರನ್ನು ಎಷ್ಟು ಆಶ್ಚರ್ಯಗೊಳಿಸಲಿಲ್ಲ!"

"ಅದೇನು ಸೋಜಿಗದ ಕಾರಣ?"

"ಇಲ್ಲಿನ ಬಂಡೆಯ ತುದಿಯಲ್ಲಿ, ನೀರಿಲ್ಲದಲ್ಲಿ, ನಾನು ಹುಟ್ಟಿ, ಬೆಳೆದು, ನೆಲಕ್ಕೆ ಬೇರು ತಾಗಿಸುವ ತನಕ, ನಾನು ತ್ರಿಶಂಕುವಾಗಿ ನರಳಿದೆನಲ್ಲವೇ! ಆದರೂ ಕೊನೆಗೆ ಸಾಹಸದಿಂದ ಆ ಬಂಡೆಯನ್ನು ಸೀಳಿ, ಇಲ್ಲಿ ಬೇರೂರಿ ನಿಂತೆ."

ಅಹುದಹುದು–ಈ ಭರತಖಂಡಕ್ಕೆ ಬಂದವರೆಲ್ಲ ಹಾಗೇ ಮಾಡಿ, ಉಂಡ ಮನೆಗೆರಡು ಬಗೆದರು. ಉತ್ತರದಿಂದ ದಕ್ಷಿಣಕ್ಕೆ ಬಂದವರೂ ಅದೇ ಹಾದಿ ಹಿಡಿದರು. ಇದು ಸೋಜಿಗದ ಸಂಗತಿಯಲ್ಲ, ವಿಷಾದದ ಸಂಗತಿ."

"ಪ್ರತಿಯೊಂದರಲ್ಲೂ ನಿನ್ನ ತರ್ಕರೀತಿ ಬೇರೆ. ಇರಲಿ, ನಾನು ಇಲ್ಲಿ ನೆಲಸಿ ಮೂರು ಸಾವಿರ ವರ್ಷಗಳಾದುವು. ಅದಾದರೂ ಸೋಜಿಗದ ಸಂಗತಿಯಲ್ಲವೇ! ಅದರಿಂದಲಾದರೂ ನಾನು ಈ ನಾಡಿಗನೇ—ಎಂದು ತಿಳಿಯಬೇಡವೇ? ತಿರುತಿರುಗಿ ನೀನು ನನ್ನನ್ನು ಏಕೆ ಪರದೇಶಿಯೆಂದು ತಿಳಿಯುವೆ?"

"ಕಂತೆ ಪುರಾಣ! ಮೂರು ಸಾವಿರ ವರ್ಷವೇ ನಿನಗೆ!"

"ಅದರಿಂದಲ್ಲವೆ ಶ್ರೀಕೃಷ್ಣನು ನನ್ನಂತೆ ತಾನು—ಎಂದುದು. ಊರ್ಧ್ವ ಮೂಲ...."

"ಸಾಕು ಬಿಡು. ಅವನ ವಿಚಾರ ಬೇಡ. ಅವನೇನೂ ಅಂದಾನು. ವೃಂದೆಯ ಮಾನ ಹರಿಸಿ, ಧರ್ಮರಾಯನಿಂದ ಸುಳ್ಳಾಡಿಸಿದಾತ. ಧರ್ಮಶಾಸ್ತ್ರವು ಅವನಿಗಾಗಿ ಹುಟ್ಟಿರಬೇಕು."

"ಅವನ ವಿಚಾರ ಬಿಡುತ್ತೇನೆ. ಈ ನಾಡನ್ನು ಆಳಿದ ಕದಂಬರು— ನನ್ನ ಮುಂದೆ ನಲಿದವರು. ನಾನು ಇಲ್ಲಿ ನೆಲೆಯೂರಿದ ಬಳಿಕ ಎಷ್ಟು ಋಷಿಗಳು ನನ್ನ ನೆರಳಲ್ಲಿ ಬೆಳಕನ್ನು ಕಾಣಲಿಲ್ಲ! ಎಷ್ಟು ದಣಿದ ಜೀವಿಗಳು ತಂಪುಣಲಿಲ್ಲ!"

"ನಿನ್ನ ಆಶ್ರಯದ ವಿಚಾರ ಬಿಡು. ಈ ಮಳೆ ಬಾರದಿದ್ದರೆ ನಿನ್ನ ಶಿಷ್ಯರ ಉಪಕೃತಿಯನ್ನು ನಿನ್ನ ಮೂಗು ಎಂದೂ ಮರೆಯುವಂತಿರಲಿಲ್ಲ!"

"ನಾನೇನು ತಪ್ಪುಮಾಡಿದೆ? ನನ್ನನ್ನು ತಂದುದೊಂದು ಪಕ್ಷಿ. ಆ ನೆನಪಿಗೆ ಪಕ್ಷಿಸಂಕುಲಕ್ಕೆ ನಾನು ಆಶ್ರಯವಾದೆ. ನೀನು ಬಲು ಕ್ರೂರಿ. ತನಿಖೆಗೆ ಮುಂಚಿತವಾಗಿ ತೀರ್ಪೀಯುವ ನ್ಯಾಯಾಧೀಶನಂತೆ ಕಾಣುವೆ."

ಅದರ ಆರೋಪ ನನ್ನ ಹೆಮ್ಮೆಯನ್ನು ಚುಚ್ಚಿತು. ನನಗೆ ಉತ್ತರ

ದವರ ಮೇಲೆ ತುಸು ವೈರವಿತ್ತಾದರೂ ಹೀಗೆ ಬಹಿರಂಗಪಡಿಸುವುದು ಉಚಿತವಲ್ಲೆಂದು ತಿಳಿದು "ಆಗಲಿ, ನಾನು ಮೌನಿಯಾಗಿ ಕೇಳುವೆ. ನೀನೆಲ್ಲವನ್ನೂ ಹೇಳಿಬಿಡು" ಎಂದೆ.

"ನಾನ್ನೂರು ವರ್ಷಗಳ ಬೆಳವಣಿಗೆಯಿಂದ ನಾನೊಂದು ಚಪ್ಪರವಾಗಿ ಬೆಳೆದೆ. ನನ್ನ ಆವರಣಕ್ಕೆ ಮನಸೋತು ಓರ್ವ ಋಷಿಯೇ ನನ್ನಡಿಯಲ್ಲಿ ಬಂದು ನೆಲಸಿದನು. ಅವನ ಅನೇಕ ಶಿಷ್ಯರು ಇಲ್ಲಿ ಜ್ಞಾನಾರ್ಜನೆ ಮಾಡಿದರು."

ಆ ಋಷಿಯು ಉತ್ತರದವನೇ?"

"ಅಹುದು."

"ಬ್ರಾಹ್ಮಣನೇ?"

"ಹೂಂ."

"ಸಮನೆ—ಉತ್ತರದ ಬ್ರಾಹ್ಮಣರನ್ನು ಬೌದ್ಧರು ಓಡಿಸಿರಬೇಕು. ಆ ಬುದ್ಧಿಯು ಶಾಕ್ಯಮುನಿಗೆ ಬಂದುದು ನಿನ್ನಂತಹ 'ಬೋಧಿ' ವೃಕ್ಷದ ನೆರಳಲ್ಲೇ. ಅದರಿಂದ ಈ ನಿನ್ನ ಋಷಿಯು ಇನ್ನೊಂದು ಬೋಧಿ ವೃಕ್ಷದ ಕೆಳಗೆ ಕುಳಿತು ಇಲ್ಲಿನ ದ್ರಾವಿಡರನ್ನು ಓಡಿಸಲು ಯತ್ನಿಸಿರಬೇಕು."

"ಛೀ-ಅವನ ಮೇಲೇಕೆ ರೇಗುವೆ? ಅವನ ಯಾಗಶಾಲೆಯ ಕುರುಹನ್ನು ನೀನು ಬಳಿಯಲ್ಲಿ ಕಾಣುವಿಯಂತೆ. ನನ್ನ ತೊಗಟೆಯ ಮೇಲೆ, ಅನೇಕ ಸಂಸ್ಕೃತ ಋಕ್ಕುಗಳನ್ನು ಕಾಣುವೆಯಂತೆ. ಈ ತಾವು ಬಲು ದೊಡ್ಡ ಆಶ್ರಮವೆನಿಸಿತು, ವಿದ್ಯಾಲಯವೆನಿಸಿತು. ಆ ಋಷಿಯು ತೀರಿದ ಮೇಲೆಯೂ ಅವನಿಂದಾಗಿ ಜನರು ನನಗೆ ಪ್ರದಕ್ಷಿಣೆ ಬಂದು ಪೂಜಿಸುವಂತಾಯಿತು."

"ತುಸು ಮೆಲ್ಲಗೆ ಮಾತನಾಡು. ಈಗಿನ ಕಾಲದಲ್ಲಿ, ಜನರು ನಿನ್ನಡಿಯಲ್ಲಿ ನೆರೆದರೆ, ನರಬೇಟೆಯಾಡುತ್ತಾರೆ. ಇರಲಿ, ಆ ಋಷಿಯು ಬಂ

ದಾಗ, ಈ ನಾಡಿಗರೇನು ಮಾಡಿದರು?—ಆಗಿನ ದ್ರಾವಿಡರು?"

"ಅವರು ಅವನ ಶಿಷ್ಯರಾಗಿ, ಅವನಿಂದ ಸಂಸ್ಕೃತರಾದರು! ಅವರ ಉದ್ಧಾರಕ್ಕಾಗಿ ಆ ಋಷಿಯು ಎಷ್ಟೊಂದು ಹೆಣಗಾಡಲಿಲ್ಲ. ಮೊದಲಿಗೆ ಊರಿನ ಅರಸನನ್ನು ತಮ್ಮ ತಪೋಬಲದಿಂದ ಬ್ರಾಹ್ಮಣ ಧರ್ಮಿಯನ್ನಾಗಿ ಮಾಡಿಕೊಂಡು...."

"ಸೋಮರಸದಿಂದಲೇ? ಹೋಗಲಿ, ನಿನಗೆ ಎಷ್ಟು ಕಾಲ ಈ ಮನ್ನಣೆ ದೊರೆಯಿತು...."

"ಆ ಋಷಿಯ ಬಳಿಕ, ಊರವರು ನನಗೇನೆ ಜನಿವಾರ ತೊಡಿಸಿದರು—ಉಪನಯನ ಮಾಡಿದರು."

"ಹೋ ನೀನು ವಟುವೃಕ್ಷವೆನಿಸಿದೆಯಾ? ಅದರಿಂದ ವಿಪ್ರನೂ ಆದೆಯಲ್ಲವೇ?"

"ಬೇವಿನ ಮರವನ್ನು ಜತೆಗೆ ತಂದು ನಟ್ಟರು. ನನಗೆ ಲಗ್ನಮಾಡಿಸಿದರು. ಆದರೆ ಅಲ್ಪಕಾಲಕ್ಕೆ ಮಾತ್ರ ಅದರ ಜೀವ ಉಳಿಯಿತು. ನನ್ನ ಬಳಿಯಲ್ಲಿ ನಾಗ ಮೂರ್ತಿಗಳನ್ನು ತಂದಿರಿಸಿದರು."

"ಹೋ—ನಾಗಕನ್ಯೆಯರನ್ನು ಮೋಹಿಸಿದ ಅರ್ಜುನನೇ ನೀನು? ಆದರೆ ಈಗೆಲ್ಲಿ ಆ ಮೂರ್ತಿಗಳು?"

"ನನ್ನ ಬೇರುಗಳ ಗರ್ಭದಲ್ಲಿ ಸೇರಿ ಮಿಲನವಾಗಿದ್ದಾರೆ. ನಾನೀಗ ಆಗಿನಂತಿಲ್ಲ. ಆಗಿನ ನನ್ನ ಮುಖ್ಯ ಕಾಂಡವೇ ಅದ್ಭುತಾಕಾರವಾಗಿತ್ತು. ಅದು ಜೀವಂತವಾಗಿರಲು ನಾಗಗಳ ಆವಾಸವೇ ನಾನಾಗಿದ್ದೆ. ಆದರೆ ಈಗ ನಾನು, ನಾನಾ ಎಡೆಗಳಿಗೆ ಬೇರುಗಳನ್ನು ಚಾಚಿ ಸಾವನ್ನು ಧಿಕ್ಕರಿಸಿ, ಕಾಂಡವನ್ನು ಬೆಳೆಸಿ ವಿಸ್ತೃತ ಜೀವನ ಮಾಡುತ್ತಿರುವೆ."

"ನಿನ್ನ ನಾಗಕನ್ಯೆಯರಿಂದ ಕಡಿಸಿಕೊಂಡು ಸತ್ತವರ ಸಂಖ್ಯೆ ಎ ರಡು?"

"ಹಾಗೆ ಒಬ್ಬಿಬ್ಬರು ಸತ್ತಿರಬಹುದು. ಆದರೆ ನನ್ನ ನೆರಳಿನ ಅಡಿಯಲ್ಲಿ ಆನಂದಪಟ್ಟವರ ಸಂಖ್ಯೆ ಸಹಸ್ರಾರೆಂಬುದನ್ನು ಮರೆಯುವಿಯಾ?"

"ನಾನು ಇಲ್ಲಿ ಬಂದು ಆದುದೂ ಅಷ್ಟರಲ್ಲಿದೆ. ನಿನ್ನ ಉಪಕಾರದ ಸವಿಯನ್ನು ನಾನಂತು ಕಂಡಾಯಿತು."

"ಹಾಗಾದರೆ—ನನ್ನನ್ನು ಪೂಜಿಸಿದ ಬಂಜೆಯರು ತಾಯಂದಿರಾದುದು ಸುಳ್ಳೇ?"

"ಅದೇನು ಕತೆ?"

"ಕೆಲವು ಶತಮಾನಗಳ ಹಿಂದೆ ಇಲ್ಲಿ ಇನ್ನೊಬ್ಬ ಸಾಧು ಬಂದು ನೆಲಸಿದನು. ಅವನ ಬಳಿಗೆ, ಈ ಊರಿನ ಬಂಜೆಯೊಬ್ಬಳು ಬಂದು ಶಿಶುಭಿಕ್ಷೆಯನ್ನು ಬೇಡಿದಳು. ಅದಕ್ಕವನು "ಈ ಅಶ್ವತ್ಥ ವೃಕ್ಷಕ್ಕೆ ನೂರೆಂಟು ಬಾರಿ ಸುತ್ತು ಬಾ, ಕೆಲವು ಕಾಲ" ಎಂದನಂತೆ. ಆಕೆಯು ಅನುದಿನವೂ ಹಾಗೆ ಮಾಡಲಾಗಿ, ಒಂದು ದಿನ ಬಸುರಿಯಾಗಿ, ತಾಯಿಯಾದಳು. ಅಂದಿನಿಂದಲೂ ಬಂಜೆಯರು ನನಗೆ ಮನ್ನಣೆ ಸಲಿಸುತ್ತ ಬಂದಿದ್ದಾರೆ."

"ಈಗಲೂ ನಿನಗೆ ಸುತ್ತುಬರುವರೇ?"

"ಅದು ಅವರವರ ವಿಶ್ವಾಸ."

"ಹಾಗೆನ್ನಬೇಡ—ನಿನ್ನ ಸುತ್ತು ಬಂದ ಬಂಜೆಯರೆಲ್ಲರೂ ತಾಯಾದರೆನ್ನುತ್ತೀಯಾ?"

"ಒಬ್ಬಾಕೆ ಮಾತ್ರ ಆಗಲಿಲ್ಲ. ಅವಳು ನನ್ನಂತಹ ವಿಶಾಲ ವೃಕ್ಷಕ್ಕೆ ಸುತ್ತು ಬರಲಾರದೆ, ನನ್ನದೇ ಒಂದು ಗಿಡವನ್ನು ನಟ್ಟು, ಅದರ ಸುತ್ತು ಬಂದಳು. ಆ ಋಷಿಯು ನನ್ನ ಸುತ್ತು ಬರಲು ಹೇಳಿದ್ದನೇ ವಿನಾ, ಯಾವಾವ ಅಶ್ವತ್ಥವೆನ್ನಲಿಲ್ಲ!"

"ಬಂಜೆಯರ ಬದಲು ಗರ್ಭಿಣಿಯರೇ ನಿನಗೆ ಸುತ್ತುಬಂದರೆ,

ತಾಯ್ತನ ಅಳಿಯಲೂ ಅಡ್ಡಿಯಿಲ್ಲ."

"ಹಾಗೊಮ್ಮೆ ಆಯಿತೆಂದು ತಿಳಿಸಲು ನನಗೆ ತುಂಬ ವ್ಯಥೆಯಾಗುತ್ತದೆ."

"ವ್ಯಥೆಯಾಗುವುದಲ್ಲ, ನಾಚಿಕೆಯಾಗಬೇಕು. ಇರಲಿ, ಈಗ ನಿನ್ನಲ್ಲಿನ ಬ್ರಹ್ಮರಾಕ್ಷಸನ ಕತೆಯೇನು? ನೀನೇ ಆ ರಕ್ಕಸನೇ, ಅಥವಾ ನಿನ್ನಲ್ಲಿ ಆವಾಸವಿರುವ ಬೇರೆ ಪ್ರೇತಾತ್ಮರುಂಟೆ?"

"ಬಲು ಹಿಂದೆ, ಯಾವನೋ ಒಬ್ಬ ಬ್ರಹ್ಮಚಾರಿಯು, ನನ್ನ ರೆಂಬೆಗೆ ಜೋತು, ಆತ್ಮಹತ್ಯೆ ಮಾಡಿಕೊಂಡನು. ಆ ದಿನದಿಂದ ಅವನ ಪ್ರೇತ ಬ್ರಹ್ಮರಕ್ಕಸವಾಗಿ ನನಗೆ ಅಂಟಿದೆಯೆನ್ನುತ್ತಾರೆ. ಇದು ವಾಡಿಕೆಯ ಮಾತಷ್ಟೆ! ಅಂದಿನಿಂದ--ಬ್ರಹ್ಮಚಾರಿಯಾಗಿ ಸತ್ತರೆ ಸದ್ಗತಿಯಿಲ್ಲ ಎನ್ನುತ್ತಾರೆ. ಹೆಚ್ಚೇನು – ನನ್ನ ಜತೆಗೆ ಬೇವಿನ ಗಿಡ ನಟ್ಟು ಲಗ್ನಮಾಡಿಸಿದುದಾದರೂ ಅದಕ್ಕೇನೆ."

"ಹೂಂ, ನಿನ್ನ ಆಯುಷ್ಯದ ದೀರ್ಘಾನುಭವ, ಆ ಬೇವಿನ ಕಹಿ ಅನುಭವಗಳು ಸೇರಿಕೊಂಡು ಬಾಳಿನ ಪಾಕ ಕಹಿಯೆಂದು ತಿಳಿದರೋ ಏನೊ!"

ಅದಾಗಲೇ ಬೆಳ್ಳಿಮೂಡುವ ಚಿಹ್ನೆ ಕಾಣಿಸಿತು. ಆ ವೃಕ್ಷಕ್ಕೆ ಬೆದರಿಕೆಯಾಗುತ್ತಿದ್ದಂತೆ ಅದರ ಸ್ವರದಿಂದ ಕಾಣಿಸಿತು. ಅದು ಥರಥರಿಸುತ್ತ "ಅಣ್ಣಾ, ನೀನು ನನ್ನನು ಬೇಕಾದಂತೆ ಹಳಿ. ಆದರೂ ತೀರ ಅಧಮನಿಗೂ ಬಾಳಿನಮೇಲೆ ಮಮತೆಯಿಲ್ಲವೇ? ಈಗಂತು ನನಗೆ ಮೊದಲ ಯುಗಗಳ ಪೂಜೆ, ಸಮಾನುಗಳನ್ನು ಸಲಿಸುವವರಿಲ್ಲ. ನನಗೆ 'ಪಿಂಚನು' ಬಂದಂತಾಗಿದೆ. ಆದರೂ ಬದುಕುವ ಆಸೆ ಕಾಡುತ್ತಿದೆ. ಅಮರವಾಗಿ ಬದುಕುವ ಆಸೆಹೋಗದಲ್ಲ! ಅದನ್ನು ಕಾಯಲಾರೆಯಾ?

"ನಿನಗೂ ಸಾವಿನ ಭೀತಿಯೇ? ಕಟ್ಟಿಗೆಗೂ ಕೂಡ ಬರಬಾರದ

ನಾರುಜಾತಿ ನೀನು. ಹೋಮಕ್ಕೆ ಸಮಿಧೆಯಾಗಿ ಬಳಸಿದರೂ ಉರಿಯದೆ ಹೊಗೆಯಾಗಿ ತೇಲುವ ಜಾತಿ ನಿನ್ನದು. ಹಿಂದಕ್ಕೆ ನಿನ್ನನ್ನು ಪೂಜಿಸಿದ ಆರ್ಯರು, ಸಿಂಧುದೇಶದ ದ್ರಾವಿಡರನ್ನು ನಿನ್ನ ಹೊಗೆಯಿಂದಲೇ ಊರುಬಿಡಿಸಿದರು. ಈಗ ನಿನಗೇನು ಸಾವಿನ ಪ್ರಸಂಗ?"

"ಅಣ್ಣಾ — ನನ್ನನ್ನು ಬರಿದೆ ಇರಗೊಟ್ಟರೆ ಹೇಗಾದರೂ ಬದುಕಬಲ್ಲೆ. ಹಳಬನು ನಾನು, ಪುರಾಣವೃಕ್ಷ — ಎಂಬ ಮನ್ನಣೆಯಿಂದಲಾದರೂ ನಾಡಿನ ಕೊಡಲಿರಾಮರಿಂದ ಪಾರಾಗಬಲ್ಲೆ. ಆದರೆ ನಿನ್ನ ನಾಸ್ತಿಕ ಸರಕಾರಕ್ಕೇನುಮಾಡಲಿ— ಹೇಳು."

"ನನಗೆ ಮೊದಲಿಂದಲೂ ಸರಕಾರವೆಂದರೆ ದ್ವೇಷ. ಸರಕಾರಗಳೆಂದರೆ ಅಪನಂಬುಗೆ. ಸರಕಾರದ ವೈರಿಗಳು ನನ್ನ ಗೆಳೆಯರೆಂಬುದು ನನ್ನ ತತ್ವ. ಹೀಗಾಗಿ ಒಮ್ಮೆಗೇ ನನ್ನಲ್ಲಿ ಆ ಅಶ್ವತ್ಥದ ಮೇಲಿನ ಮಮತೆ ಉಕ್ಕಿಬಿಟ್ಟಿತು. "ಹಾಗೋ-ಹಾಗಾದರೆ ಥಟ್ಟನೆ ಹೇಳು. ಆ ಸರಕಾರದಿಂದ ನಿನಗೇನು ಉಪದ್ರ ಬರುವಂತಿದೆ — ತಿಳಿಸು. ಈಗಲೇ ಸಾರ್ವಜನಿಕ ಚಳವಳ ಹೂಡುತ್ತೇನೆ."

"ಹಾಗೆ ಅವಸರ ಮಾಡಿದಲ್ಲಿ ಕೆಲಸವೇ ಕೆಟ್ಟೀತು. ನನ್ನಿಂದಾಗಿ ಈ ಊರದಾರಿಯು, ಬಳಸಿ, ನನಗೆ ಸುತ್ತುವರಿದು ಬರುವಂತಾಗಿದೆ. ಅದು ನನ್ನ ತಪ್ಪಲ್ಲ. ದಾರಿ ನನ್ನ ಬಳಿಕ ಹುಟ್ಟಿದುದು. ಈಗ ಇಲ್ಲಿಗೆ ಗವರ್ನರರೋ, ವಾಯಸರಾಯರೋ ಬರುವರಂತೆ. ಅವರಿಗಾಗಿ ನೇರದಾರಿಯನ್ನು ನಿರ್ಮಿಸಲು ನನ್ನನ್ನು ಕಡಿಯಲು ನಿರ್ಧರಿಸಿದ್ದಾರೆ. ಯಾರ ಭೀತಿಯೂ ಇಲ್ಲದೆ ಈತನಕ ಬದುಕಿವ ನಾನು, ಮೋಟರುಗಳ ದಾರಿಗಾಗಿ ಸಾಯುಬೇಕಾಯಿತೆ! ಇಂಥ ಹೀನ ಮೃತ್ಯು ನನಗೆ ಸನ್ನಿಹಿತವಾಗಬೇಕೇ?"

ಅದನ್ನು ಕೇಳುತ್ತಲೇ ನನ್ನ ಕ್ರಾಂತಿ ಬುದ್ಧಿ ದೇಶಭಕ್ತಿಗಳು ಉಕ್ಕಿ

ಕೋಡಿಹರಿದುವು. "ಈಗಲೀ ಪತ್ರಿಕೆಗಳಿಗೆ ಬರೆಯುತ್ತೇನೆ; ಕಂಡಕಂಡವರನ್ನು ನಿಲ್ಲಿಸಿ 'ಈ ಸದ್ಯದ ಪರಿಸ್ಥಿತಿ'ಯ ಮೇಲೆ ಉಪನ್ಯಾಸ ಹೂಡುತ್ತೇನೆ; ಸತ್ಯಾಗ್ರಹಕ್ಕೂ ಮುಂದೇನೆ. ಬಾಟನಿಶಾಸ್ತ್ರದ ತವರೂರಾದ ಅಶ್ವತ್ಥ, ಹಿಂದೂಧರ್ಮದ ನೆಲೆಯಾದ ಅಶ್ವತ್ಥ, ಪಶುಪಕ್ಷಿ, ಮೃಗವಿಹಂಗಮುಗಳ ಆಸರೆಯಾದ ಅಶ್ವತ್ಥ, ಅನೇಕ ಬರಹಗಳಿಂದ ಪ್ರಾಕ್ತನ ವಿಮರ್ಶೆಗೆ ಅವಶ್ಯವಾದ ಅಶ್ವತ್ಥ — ಇದು ನಾಲ್ಕು ಕ್ಷಣದ ಮೋಟರಿನ ಅಪಘಾತಕ್ಕೆ ಗುರಿಯಾಗಬೇಕೆ? Ancient monuments actಗೆ ಇದು ಏಕೆ ಸೇರಬಾರದು!" ಎಂದು ರೇಗಿಬಿಟ್ಟೆ. ನನ್ನ ಭೀಕರ ದೇಶಭಕ್ತಿಯ ರೋಷಾವೇಶದಲ್ಲಿ ಅದಕ್ಕೆ ವಿಶ್ವಾಸವಾಯಿತು. ಜತಗೆ ಗಾಬರಿಯೂ ಆಯಿತು. ಅದೆಂದಿತು:

"ಅಣ್ಣಾ-ನೀನು ಈ ನಾಡಿನ ಪರಶುರಾಮನಾಗಬೇಡ! ತುಸು ಸಾವಧಾನ ತಾಳು. ಚಳವಳದಿಂದ ಕಾರ್ಯಸಾಧನೆಯಾಗದು. ಇನ್ನು ಳಿದಿರುವುದು ಬರಿಯ ಹತ್ತು — ಹದಿನೈದು ದಿನಗಳು. ನನ್ನನ್ನು ಬಂದು ಅಳೆದುಹೋಗಿದ್ದಾರೆ. ಉಪಾಯದಿಂದ ಈ ಕೆಲಸವನ್ನು ಸೂಚಿಸಿದ ಪಬ್ಲಿಕ ವರ್ಕ್ಸ್ ಎಂಜಿನಿಯರನನ್ನು ತಡೆದರೆ ಆಗುತ್ತದೆ........

ಅಂದರೆ ನೋಡು—ಆತ ತಾಜಾ ಬ್ರಾಹ್ಮಣ. ಅದರಲ್ಲೂ 'ಅಯ್ಯರ' ಹಳೆಯ ನಂಬುಗೆಗಳಿಗೆ ತವರುಮನೆ. ನೀನು ಅಂಥವರ ಮನೆಯಲ್ಲಿ ಈ ದಿನವೇ ಸೇರಿ, ಅವರ ಶ್ರದ್ಧಾಳು ಮಡದಿಯನ್ನು ಕಂಡು, ಸಾಮುದ್ರಿಕನಾಗಿ ಭೀತಿಗೊಳಿಸು. ಆಕೆ ಗರ್ಭಿಣಿ. 'ನಿನ್ನ ಪತಿಯು ಬ್ರಹ್ಮಹತ್ಯ ಮಾಡಲು ಅಣಿಯಾಗಿದ್ದಾನೆ. ಅದರಿಂದ ನಿನ್ನ ಸಂತಾನಶ್ರೀ ನಾಶವಾಗುವುದೆಂದು ಹೇಳಿ ಬಂದರೆ ಸಾಕು" — ಎಂದು ಉಪಾಯ ಹೇಳಿತು.

ನನಗೆ ಆ ನಾಟಕ ಕಷ್ಟವೆಂದೂ, ಪರಾಕ್ರಮದ ಚಿಹ್ನೆಅಲ್ಲವೆಂದೂ ಅನಿಸಿತು. ಆದರೆ ದೀರ್ಘಾಲೋಚನೆ ಮಾಡಿದೆ. ಮೂರುಸಾವಿರ ವರ್ಷ

ಗಳ ಕಾಲ, ಅಚ್ಚಳಿಯದೆ ನಿಂತು, ನಮ್ಮ ನಾಡಿನ ಜೀವನವನ್ನು ಕಂಡು, ಅದರ ಮರ್ಮಸ್ಥಾನವನ್ನು ಕಂಡುಹಿಡಿದ ಆ ಮರದ ತೀರ್ಮಾನ ಸಮನಾಗಿ ಕಂಡಿತು. ಧರ್ಮ, ನಂಬುಗೆಗಳು— ಜನರ ಕಂಕುಳ ಕುಳಿ, ಕತ್ತುಗಳಿದ್ದಂತೆ! ಅಲ್ಲಿ ಕಚಕುಳಿ ಮಾಡಿದರೆ ಎಂಥ ಜಟ್ಟಿಯ ಮುಷ್ಟಿ ಹಿಡಿತವೂ ತಪ್ಪುತ್ತದೆ ಎಂದೊಪ್ಪಿದೆ.

ಆಗ ಬೆಳ್ಳಿ ಮೂಡಿತ್ತು. ವಾಣಿಯು ಅದೃಶ್ಯವಾಯಿತು. ನಾನೂ ಸ್ಥಳವನ್ನು ಬಿಟ್ಟೆ. ಪರನಾಡಿನಲ್ಲಿ ಸಾಮುದ್ರಿಕನಾಗಿ, ಎಂಜಿನಿಯರನ ಮಡದಿಯನ್ನು ಭೀತಿಗೊಳಿಸಿದೆ. ಭವಿಷ್ಯದ ಫಲ ನಿರೀಕ್ಷಣೆಗಾಗಿ— ಅದೇ ಊರಿನಲ್ಲಿ ಕಾದು ಕುಳಿತೆ. ಹದಿನೈದು ದಿನಗಳು ಕಳೆದುವು. ಗವರ್ನರರು, ವಾಯುಸರಾಯರು ಸೇರಿಕೊಂಡೇ ಬಂದರು. ಅವರೂ ಅಶ್ವತ್ಥವೃಕ್ಷಕ್ಕೆ ಅರ್ಧಪ್ರದಕ್ಷಿಣೆ ಬಂದೇ ಹೋದರು. ಅದನ್ನು ಕಡಿಯಲು ಅಂದಾಜುಮಾಡಿದ ಹಣವನ್ನು, ಅದರ ಅಲಂಕಾರಕ್ಕಾಗಿ ಆ ದಿನ ಬಳಸಿದರು. ಹೆಚ್ಚೇನು — ಅದರ ವಿಚಿತ್ರ ಆಕಾರವನ್ನು ಕಾಣಲು ಅವರುಗಳೇ ಕಾರಿನಿಂದ ಕೆಳಕ್ಕೆ ಇಳಿದರು. ವಿಸ್ಮಯಪಟ್ಟರು!

ನನಗೆ ಆ ದಿನ ಉಂಟಾದ ಹೆಮ್ಮೆ, ಆ ವೃಕ್ಷಕ್ಕಾದ ಹರ್ಷಕ್ಕಿಂತ ನೂರ್ಮಡಿ. ನಾನು ಅಂದೇನೆ ನಿಶ್ಚಯಿಸಿದೆ— ಈ ನಾಡಿನಲ್ಲಿ ಯಾವ ಉಪದ್ವ್ಯಾಪ ಮಾಡುವುದಾದರೂ 'ಧರ್ಮ, ಶ್ರದ್ಧೆ'ಗಳ ಹೆಸರಿನಲ್ಲೇ ಅದನ್ನು ನಡೆಯಿಸಬೇಕೆಂದು ಪಣತೊಟ್ಟೆ.



